

# ಸಿದ್ಧಗಂಗಾ



ಜೂನ್ ೨೦೦೧



ಕರ್ನಾಟಕದ ಸನ್ಮಾನ್ಯ ರಾಜ್ಯಪಾಲರಾದ ಶ್ರೀಮತಿ ವಿ.ಎಸ್. ರಮಾದೇವಿ ಅವರು ಜೂನ್ ೬ರಂದು ಶ್ರೀ ಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರು ಉಪಸ್ಥಿತರಿದ್ದರು.



ಅಚ್ಚರಿಯಿಂದ ದಾಸೋಹ ಮಂದಿರವನ್ನು ವೀಕ್ಷಿಸುತ್ತಿರುವ ರಾಜ್ಯಪಾಲರು



ವಿದ್ಯಾರ್ಥಿನಿಲಯಕ್ಕೆ ಭೇಟಿ



ಮುಖಪುಟ
ಶ್ರೀಮಠಕ್ಕೆ
ಸನ್ಮಾನ್ಯ ರಾಜ್ಯಪಾಲರಾದ
ಶ್ರೀಮತಿ ವಿ.ಎಸ್. ರಮಾದೇವಿ ಅವರ ಭೇಟಿ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭  ಜೂನ್ ೨೦೦೧  ಸಂಚಿಕೆ : ೬

## ಒಳಪುಟಗಳಲ್ಲಿ..........



ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ– ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು– ೫೪
ದೂರವಾಣಿ : ೩೩೪೪೦೮೭

ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ

| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೫೦೦/- |
| ತುಮಕೂರು ಜಿಲ್ಲೆ– ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಶ್ರೀಮಠದಲ್ಲಿ ವಿಶೇಷ ದೃಶ್ಯ....

ಜೂನ್ ತಿಂಗಳು ಬಂದಿತೆಂದರೆ ಸಿದ್ಧಗಂಗಾ ಮಠದಲ್ಲಿ ವಿಶೇಷ ದೃಶ್ಯ. ಎಲ್ಲೆಲ್ಲೂ ಜನ ಜನ ಜನ. ವಿದ್ಯಾಭ್ಯಾಸದ ಮುಂದುವರಿಕೆಗಾಗಿ ರಾಜ್ಯದ ಮೂಲೆ ಮೂಲೆಗಳಿಂದ ಬಂದ ಪ್ರವೇಶಾರ್ಥಿಗಳ ದಟ್ಟಸಂದಣಿ. ವಿದ್ಯಾರ್ಥಿಗಳು, ಪೋಷಕರು ಮಠದ ಆವರಣದ ತುಂಬ ಓಡಾಡುತ್ತಿರುವ ನೋಟ. ದೂರದ ಗುಲ್ಬರ್ಗ, ಬೀದರ್, ಬಿಜಾಪುರ, ಬಳ್ಳಾರಿ, ರಾಯಚೂರು, ಧಾರವಾಡಗಳಿಂದ ಬಂದವರೇ ಹೆಚ್ಚು. ಬೆಂಗಳೂರು, ಹಾಸನ, ಕೋಲಾರ, ಚಿಕ್ಕಮಗಳೂರು, ಚಿತ್ರದುರ್ಗ ಜಿಲ್ಲೆಗಳಿಂದ ಬಂದವರೂ ಸಾಕಷ್ಟು. ಹಾಗೆ ಬಂದವರು ಎಲ್ಲ ಸಮಾಜಕ್ಕೆ ಸೇರಿದ್ದಾರೆಂಬುದು ಗಮನಿಸಬೇಕಾದ ಮಾತು. ಲಿಂಗಾಯಿತರು, ಕುರುಬರು, ನಾಯಕರು, ಒಕ್ಕಲಿಗರು – ಮುಂತಾಗಿ ಹರಿಜನರು– ಎಲ್ಲರಿರುತ್ತಾರೆ. ಎಲ್ಲರಿಗೂ ಪ್ರವೇಶವಿರುತ್ತದೆ.

ಪೂಜ್ಯ ಶ್ರೀಗಳವರೇ ತಮ್ಮೆಲ್ಲ ಕಾರ್ಯಗಳ ನಡುವೆ ಬಿಡುವು ಮಾಡಿಕೊಂಡು ಪ್ರತಿಯೊಬ್ಬರನ್ನು ವಿಚಾರಿಸಿ ಪ್ರವೇಶಾನುಮತಿ ನೀಡುತ್ತಾರೆ. ಮೊನ್ನೆಯೊಬ್ಬ ಗುಲ್ಬರ್ಗದ ಕಡೆಯಿಂದ ಬಂದ ಚಿಕ್ಕ ವಿದ್ಯಾರ್ಥಿಯನ್ನು ಪ್ರಶ್ನಿಸುತ್ತಿದ್ದರು. *"ಇಲ್ಲಿ ರೊಟ್ಟಿ ಊಟ ಇಲ್ಲವಲ್ಲಾ ಏನು ಮಾಡುತ್ತೀಯೇ?"* ಎಂದು ಶ್ರೀಗಳವರ ಕಳಕಳಿಯನ್ನು ಅರ್ಥಮಾಡಿಕೊಂಡ ಆ ವಿದ್ಯಾರ್ಥಿಯ ತಾಯಿ ಉತ್ತರಿಸಿದರು. **"ಬುದ್ದೀ ಊಟ ಮುಖ್ಯವಲ್ಲ, ತಮ್ಮ ಆಶ್ರಯದಲ್ಲಿ ಈ ಮಗು ಬೆಳೆದರೆ ಸಾಕು, ಮನುಷ್ಯನಾದರೆ ಸಾಕು. ಬಂದಾಗಿನಿಂದ ಇಲ್ಲಿನ ಪರಿಸರ ನೋಡುತ್ತಿದ್ದೇನೆ. ಮನಸ್ಸು ತುಂಬಿ ಬಂದಿದೆ. ಇಲ್ಲಿ ನಡೆದಿರುವ ಒಂದೊಂದು ಕಲ್ಯಾಣದಲ್ಲಿ ನಡೆದ ಬಸವಣ್ಣನವರ ಸೇವೆಯೇ ಕಣ್ಣಿಗೆ ಕಟ್ಟಿದಂತೆ ಕಾಣಿಸುತ್ತದೆ. ನಿಮ್ಮ ಉಡಿಯಲ್ಲಿ ಮಗುವನ್ನು ಹಾಕುತ್ತಿದ್ದೇನೆ"** – ಎಂದು ಬಾಗಿ ಶ್ರೀಗಳವರ ಪಾದದಲ್ಲಿ ತಲೆಯಿಟ್ಟು ನಮಸ್ಕರಿಸಿದ್ದು ಸ್ಮರಣೀಯವಾಗಿದ್ದಿತು. ಹಂಡೆ, ಅಂಬಿಗ ಎನ್ನುವಂಥ ಮನೆತನದ ಹೆಸರನ್ನು ಹೊತ್ತ ಕಂದಮ್ಮಗಳೇ ಹೆಚ್ಚು. ಪೋಷಕರಂತೂ ತಮ್ಮ ಕಷ್ಟ, ಸಂಕಷ್ಟಗಳನ್ನು ತೋಡಿಕೊಳ್ಳುತ್ತಿದ್ದ ದೃಶ್ಯ ಯಾರೂ ನೋಡುವಂತಿದ್ದಿತು.

ಶ್ರೀಗಳವರು ವಿವಿಧ ತರಗತಿಗಳಿಗೆ ಸೇರಬಂದವರನ್ನು ಸವಿವರವಾಗಿ ವಿಚಾರಿಸಿದ ನಂತರವೇ ಪ್ರವೇಶಕ್ಕೆ ಮುದ್ರೆ ಹಾಕುವುದು. ಅದು ಐವತ್ತು-ಅರವತ್ತು ವರ್ಷಗಳಿಂದ ಪೂಜ್ಯರು ಅನುಸರಿಸಿಕೊಂಡು ಬಂದಿರುವ ಪದ್ಧತಿ. ಅವರೇ ಪ್ರವೇಶ ಪತ್ರವನ್ನು ಪರಿಶೀಲಿಸುತ್ತಾರೆ. ಅನಂತರ ಕರೆಸುತ್ತಾರೆ. ಹುಡುಗನನ್ನು ಆತ್ಮೀಯವಾಗಿ ಮಾತನಾಡಿಸುತ್ತಾರೆ. ಪೋಷಕರೊಂದಿಗೆ ಸಮಾಲೋಚಿಸುತ್ತಾರೆ. ಮಠದ ನಿಯಮ ನಿಬಂಧನೆಗಳ ಸ್ಥೂಲ ಪರಿಚಯ ಮಾಡಿಕೊಡುತ್ತಾರೆ. ಶ್ರೀಗಳವರು ಈ ವ್ಯವಸ್ಥೆಯಲ್ಲಿ ಆಯಾಸವನ್ನೇ ಗಣಿಸುವುದಿಲ್ಲ. ವೈಯಕ್ತಿಕ ಗಮನ ಕೊಡುವುದರಲ್ಲಿ ಅಪಾರ ವಿಶ್ವಾಸ ಪೂಜ್ಯರಿಗೆ.

ಇನ್ನೊಂದು ಮಾತು, ಶ್ರೀಮಠದ ಶಿಕ್ಷಣ ಸಂಸ್ಥೆಗಳ ಪ್ರವೇಶಾವಕಾಶಕ್ಕೆ ಮಧ್ಯವರ್ತಿಗಳಿಗೆ ಅವಕಾಶಕೊಡುವುದಿಲ್ಲ. ಎಲ್ಲ ಪಾರದರ್ಶಕ ವ್ಯವಸ್ಥೆ. ವಿದ್ಯಾರ್ಥಿಗಳೊಂದಿಗೆ ಬಂದ ತಂದೆ ತಾಯಿಗಳು, ಪಾಲಕರು, ಪೋಷಕರು ವಾರ ಹತ್ತು ದಿನಗಳಿದ್ದು ಮಠದ ಸೇವಾಜೀವನವನ್ನು ಶ್ರೀಗಳವರ ದಿನಚರಿಯನ್ನು ಕಣ್ಣಾರೆಕಂಡು ತೃಪ್ತಿಯಿಂದ ಮಕ್ಕಳನ್ನು ಬಿಟ್ಟು ಧನ್ಯಭಾವದಿಂದ ತೆರಳುತ್ತಾರೆ. ಶ್ರೀಮಠದ ಪರಿಸರದ ಪಾವಿತ್ರ್ಯತೆಗೆ ಶ್ರಮಿಸುವ ಸಿಬ್ಬಂದಿಯಿದೆ. ಎಳ್ಳಷ್ಟೂ ಬೇಸರಿಸದ ಸೇವೆ ನಡೆಯತ್ತದೆ. ಸಂಜೆ ಮುಂಜಾನೆಗಳ ಸಾಮೂಹಿಕ ಪ್ರಾರ್ಥನಾ ಸಭೆ ಅವಿಸ್ಮರಣೀಯ ದೃಶ್ಯವಾಗಿರುತ್ತದೆ.

ಪ್ರಾಥಮಿಕ ಶಾಲೆಯಿಂದ ಮೊದಲುಗೊಂಡು ಸ್ನಾತಕೋತ್ತರ ತರಗತಿಯವರೆಗೆ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಮಠದಲ್ಲಿದ್ದಾರೆ. ಸಂಸ್ಕೃತ ವಿದ್ಯಾಭ್ಯಾಸ ಅವರಿಗೆಲ್ಲ ಕಡ್ಡಾಯ. ಅದೂ ವಿದ್ವತ್ ತರಗತಿಯವರೆಗೆ ಅವಕಾಶ. ಅಂಥ ಮಕ್ಕಳಿಗೆ ವಿಶೇಷ ವ್ಯವಸ್ಥೆ, ಪ್ರತ್ಯೇಕ ನಿವಾಸ, ವ್ಯಾಸಂಗ ಸೌಲಭ್ಯ. *"ಶ್ರೀಮಠದಲ್ಲಿ ವ್ಯಾಸಂಗಿಸುವುದೆಂದರೆ ಜೀವನದ ಭವಿಷ್ಯಕ್ಕೆ ಸಂಸ್ಕಾರವನ್ನು ತಂದುಕೊಂಡಂತೆಯೇ"* ಎಂದಿದ್ದಾರೆ ರಾಷ್ಟ್ರದ ಪ್ರಧಾನಿಗಳಾಗಿರುವ ಸನ್ಮಾನ್ಯ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು.

– ಸಂಪಾದಕ







## ಸರಳ ವಿವಾಹ

ಮೊನ್ನೆ ಮಠಕ್ಕೆ ಮಧ್ಯಮ ವರ್ಗದ ಅಭಿಮಾನಿಗಳೊಬ್ಬರು ಬಂದಿದ್ದರು. ತಮ್ಮ ಮಗಳ ವಿವಾಹದ ನಿಶ್ಚಿತಾರ್ಥವನ್ನಿಟ್ಟು ಕೊಂಡಿರುವುದಾಗಿ ತಿಳಿಸಿದರು. ಅದಕ್ಕಾಗಿ ಆಹ್ವಾನಪತ್ರಿಕೆಯನ್ನು ಮುದ್ರಣಮಾಡಿಕೊಂಡು ತಂದಿದ್ದರು. ಸುಂದರವಾಗಿದ್ದಿತು ಆಮಂತ್ರಣಪತ್ರಿಕೆ. ಕುತೂಹಲಕ್ಕಾಗಿ ಕೇಳಿದೆವು – ಆಮಂತ್ರಣ ಪತ್ರಿಕೆಗೆ ತಗುಲಿತ ಖರ್ಚು ಎಷ್ಟೆಂದು? ಅವರು ಹೇಳಿದರು ನಾಲ್ಕು ರೂಪಾಯಿ ಎಪ್ಪತ್ತೈದು ಪೈಸೆಗಳು. ಒಂದು ಪತ್ರಿಕೆಗೆಂದು ಇಷ್ಟೊಂದು ದುಬಾರಿ ವೆಚ್ಚದ ಪತ್ರಿಕೆಯ ಅಗತ್ಯವಿದೆಯೆ ಎನಿಸಿತು. ಪತ್ರಿಕೆಗೇ ಇಷ್ಟು ವೆಚ್ಚ ಮಾಡಿರಬೇಕಾದರೆ ಇನ್ನುಳಿದ ಸಮಾರಂಭಕ್ಕೆ ಎಷ್ಟೊಂದು ಖರ್ಚುಮಾಡಿರಬೇಕು ಎನ್ನುವಂತಾಯಿತು. ಅದೂ ನಿಶ್ಚಿತಾರ್ಥ ಶಾಸ್ತ್ರಕ್ಕೆ; ಅಂದರೆ 'ಎಂಗೇಜ್‌ಮೆಂಟ್' ವಿಧಿಗೆ. ಹಿಂದಿನ ಕಾಲದಲ್ಲಿ ಇದೆಲ್ಲ ಹೀಗಿರಲಿಲ್ಲ. ಹೆಣ್ಣುಗಂಡಿನ ತಂದೆ ತಾಯಿಗಳು, ಬಳಗದವರು ಎಲ್ಲ ಸೇರಿದರೆ ಇಪ್ಪತ್ತಕ್ಕಿಂತ ಹೆಚ್ಚು ಮಂದಿಯಿಲ್ಲದಂತೆ ನಿಶ್ಚಿತಾರ್ಥ ಕಾರ್ಯಕ್ರಮಕ್ಕೆ ಬರುತ್ತಿರಲಿಲ್ಲ. ಆಮಂತ್ರಣ ಪತ್ರಿಕೆಯೇನೂ ಇರುತ್ತಿರಲಿಲ್ಲ. ಆಡಂಬರ ರಹಿತವಾಗಿ; ಧಾರ್ಮಿಕ ವಿಧಿಗನುಗುಣವಾಗಿ ನಡೆದು ಹೋಗುತ್ತಿತ್ತು. ಆದರೆ, ಇಂದು ಎಲ್ಲ ಬದಲಾಗಿದೆ, ಭ್ರಮೆಗೊಳಗಾಗಿದೆ. ಪ್ರತಿಷ್ಠೆಯ ಪ್ರದರ್ಶನವಾಗಿದೆ. ಸಾವಿರಾರು ರೂ.ಗಳನ್ನು ಕೊಟ್ಟು ಅದಕ್ಕಾಗಿ ಕಲ್ಯಾಣ ಮಂದಿರಗಳನ್ನು ನಿಗದಿಮಾಡುತ್ತಾರೆ. ಪುಷ್ಪಾಲಂಕಾರ, ದೀಪಾಲಂಕಾರಗಳಿರುತ್ತವೆ. ಸಂಗೀತ ಮೇಳವಿರುತ್ತದೆ. ಭಕ್ಷ ಭೋಜ್ಯಗಳ ಶ್ರೀಮಂತಿಕೆಯಿರುತ್ತದೆ. ರಾಜವೈಭವವನ್ನು ಮೀರಿಸುವಂತಹ ಆಡಂಬರದ ವ್ಯವಸ್ಥೆಯಿರುತ್ತದೆ. ಇಂತಹುದೆಲ್ಲ ಅಗತ್ಯವೆ? ಕೇವಲ ಎಂಗೇಜ್‌ಮೆಂಟಿಗೆ ಹೀಗಾದರೆ ಇನ್ನು ವಿವಾಹ ಕಾರ್ಯಕ್ಕೆ ಹೇಗಾಗಬೇಡ? ಇದನ್ನು ಯಾರು ಆರಂಭಮಾಡಿದರು? ಇಂತಹುದು ಮುಂದುವರಿದುಕೊಂಡು ಹೋಗಬೇಕೆ. ಸಮಾಜದ ಮುಖಂಡರು, ಪ್ರತಿಷ್ಠಿತರು, ವಿಚಾರವಂತರು, ವಿದ್ಯಾವಿವೇಕಿಗಳು ಇದಕ್ಕೆ ಸಹಕರಿಸುವುದು ಸೂಕ್ತವೆ? ಚಿಂತಿಸಬೇಡವೆ? ಮತ್ತೊಂದು, ಈ ಮೊದಲು ಧಾರಮುಹೂರ್ತವಾದ ಮೇಲೆಯೇ ವಧೂ-ವರರನ್ನು ಒಟ್ಟಿಗೆ ಕೂಡಿಸುತ್ತಿದ್ದ ಸಂಪ್ರದಾಯವಿತ್ತು. ಅದೂ ಕೂಡ ಇತ್ತೀಚೆಗೆ ಬದಲಾಗಿರುವುದು ಕಾಣುತ್ತಿದೆ. ಪ್ರಥಮ ಶಾಸ್ತ್ರದ ದಿನದಂದೇ 'ಆರತಿ-ಅಕ್ಷತೆ' ನಿಯೋಜಿತವಾಗುತ್ತಿರುವುದು ನಡೆದಿದೆ. ಇದೆಲ್ಲ ಹೇಗೆ? ವಿಚಾರಹೇಗೆ? ಇನ್ನು, ವರ, ವರನ ಕಡೆಯವರು ಇಂಥ ಛತ್ರದಲ್ಲಿ ಲಗ್ನಮಾಡಿಕೊಡಬೇಕು, ಇಂತಹುದೇ ಸಿಹಿ ಊಟವಿರಬೇಕು, ಇಂಥ ವಾದ್ಯವೃಂದದವರೇ ಬೇಕು, ಅಡಿಗೆಯವರನು ನಮ್ಮನ್ನು ಕೇಳಿ ಗೊತ್ತುಮಾಡಬೇಕು, ಫಲತಾಂಬೂಲಕ್ಕೆ ತೆಂಗಿನಕಾಯಿಯಾಗಬೇಕು. ಊಟದನಂತರ ಐಸ್‌ಕ್ರೀಮ್ ಇರಬೇಕು ಎಂದೆಲ್ಲಾ ಡಿಮ್ಯಾಂಡು ಮಾಡುತ್ತಾರೆಂದು ಕೇಳಿದ್ದೇವೆ. ವರದಕ್ಷಿಣೆ ಪ್ರತಿಷ್ಠೆಯ, ಘನತೆಯ ದ್ಯೋತಕವಾಗಿಬಿಟ್ಟಿರುವುದು ಹೇಳುವಂತಿಲ್ಲ. ಲಕ್ಷ ಲಕ್ಷ ರೂ.ಗಳಲ್ಲಿ ಅದರ ಇತ್ಯರ್ಥ. ಮನೆ, ನಿವೇಶನ, ವಾಹನ– ಇತ್ಯಾದಿಗಳ ಹಕ್ಕೊತ್ತಾಯ ಇಷ್ಟಲ್ಲದೆ ಹೆಣ್ಣಿಗೆ ಹಾಕುವ ಚಿನ್ನವೆಷ್ಟು ಎಂಬ ಮುಂಗಡದ ಮಾತು. ಇದನ್ನೆಲ್ಲ ಗಮನಿಸಿದಾಗ 'ಸರಳಜೀವನ'ದ ಶೈಲಿ, **'ಮಾತು ಕತ್ತಲಕೋಣೆಯಲ್ಲಿ ಕರಿಯ ಬೆಕ್ಕನ್ನು ಹುಡುಕಿದಂತಾಗುತ್ತದೆ'** ಎನಿಸುತ್ತದೆ. ಭಾರತೀಯರು ಸರಳ ಜೀವನ ಪ್ರಿಯರು. ಆಡಂಬರ ವಿರೋಧಿಗಳು, ಪ್ರದರ್ಶನ ಪ್ರಚಾರಗಳಿಂದ ದೂರನಿಂತವರು. ಕೃತ್ರಿಮ ಜೀವನವಿರೋಧಿಗಳು. ಸಹಜ ಸುಂದರ ಬದುಕನ್ನು ಪ್ರೀತಿಸುತ್ತ ಅರ್ಥಪೂರ್ಣವಾಗಿ ಬದುಕಿದವರು ವಿವಾಹ ಸಮಾರಂಭಗಳು ಸರಳವಾಗಿ ನಡೆಯಬೇಕು. ಪ್ರೀತಿ ಪ್ರೇಮಗಳ ಆತ್ಮೀಯ ಮಂಗಳ ಕಾರ್ಯಕ್ರಮಗಳಾಗಬೇಕು. ಆರ್ಥಿಕ ಸಮಸ್ಯೆಗೆ ಹಾದಿಯಾಗಬಾರದು. ಆಡಂಬರ, ಪ್ರತಿಷ್ಠೆಗಳ ಹುಸಿ ಸಂಸ್ಕೃತಿಯ ಪ್ರದರ್ಶನಗಳಾಗಬಾರದು. ವಿವಾಹವೆಂಬುದು ಎರಡು ಹೃದಯಗಳ ಪವಿತ್ರ ಸಮ್ಮಿಳನವಾಗಬೇಕು. ಎರಡು ಮನೆಗಳ ಬೆಳಕಿನ ಹಬ್ಬವಾಗಬೇಕು. ದುಂದು ವೆಚ್ಚಸಲ್ಲದು; ಜಿಪುಣತ್ವಕ್ಕೆ ಅವಕಾಶವಾಗದಂತೆ ಮನಸ್ಸು-ಮನಸ್ಸುಗಳು ಬೆಸೆದುಕೊಳ್ಳಲು ಸಹಕಾರಿಯಾಗಬೇಕು ನಮ್ಮ ಹಬ್ಬ, ಮದುವೆ, ಗೃಹಪ್ರವೇಶ, ನಾಮಕರಣಗಳಂಥ ಕಾರ್ಯಕ್ರಮಗಳು. ಪ್ರೀತಿಯ ಸೋಪಾನಗಳಾಗಬೇಕು ಇಂಥವೆಲ್ಲ ಪ್ರೀತಿಯೊಂದೇ ನಿಜವಾದ ಐಶ್ವರ್ಯ; ಸಂಪತ್ತು ಎಂದು ತಿಳಿದಷ್ಟು ಜೀವನ ಮಧುರ !

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಕೊರಡು ಕೊನರಾಗ ಬಲ್ಲುದೆ?*
*ಬರಡು ಹಯನಾಗ ಬಲ್ಲುದೇ ಅಯ್ಯಾ?*
*ಕುರುಡಂಗೆ ಕನ್ನಡಿಯ ತೋರಿದರೆ ನೋಡ ಬಲ್ಲನೇ?*
*ಮೂಗಗೆ ರಾಗವ ಹೇಳಿದರೆ ಹಾಡಬಲ್ಲನೆ ಅಯ್ಯಾ?*
*ಹೇಗ ಬುದ್ಧಿಯ ಬಲ್ಲನೇ ಅಯ್ಯಾ?*
*ತೋಗರಿಗೆ ಉಪದೇಶವ ಹೇಳಿದರೆ*
*ಶಿವಸತ್ವಫದವರಾಗಬಲ್ಲರೇ ಅಯ್ಯಾ*
*ಇದು ಕಾರಣ*
*ಶಿವಸತ್ವಫದ ಆದೆಂಬುದು ಶಿವಜ್ಞಾನ ಸಂಪದಂಗಲ್ಲದೆ*
*ಸಾಧ್ಯವಲ್ಲ.*
*ಅಸಾಧ್ಯವಸ್ತುವಿನೊಳಗಣ ಐಕ್ಯ*
*ಅವಿವೇಕಿಗಳಿಗೆ ಅಳವಡುವುದೇ ನಮ್ಮವರಿಗಲ್ಲದೆ?*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ!*

ವಿವೇಕಶೂನ್ಯರಿಗೆ ಬೋಧೆ ಮಾಡುವುದು ವ್ಯರ್ಥವಾಗುವುದು ಎಂಬುದನ್ನು ದೃಷ್ಟಾಂತ ಮೂಲಕ ವಿವರಿಸಲಾಗಿದೆ. ಯಾರು ಶಿವಭಕ್ತಿಯ ಮೂಲಕ ತಮ್ಮೊಳಿನ ಅರಿವಿನ ಪ್ರಕಾಶವನ್ನು ಪಡೆಯುವರೋ ಅವರಿಗೆ ಶಿವಜ್ಞಾನವು ಸಮನಿಸುವುದು.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ–
ಶ್ರೀ ತೋಂ.ಸಿ.ಕೈಂ.ಸೇ. ಸಂಘ, ಎಡೆಯೂರು–ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ವಾತ್ಸಲ್ಯವಾರಿಧಿಯೆ ಕಾರುಣ್ಯದ ನಂದಿನಿಯೆ
ಉತ್ಸಾಹ ಉತ್ತುಂಗ ಶ್ರೀಗಿರಿಯೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದೆಲ್ಲಾ ಜ್ಞಾನಿಗಳು ತತ್ವಸಾರವ ಸವಿದ
ಜಗದೆಲ್ಲಾ ಡೊಂಕುಗಳ ಮನಗಂಡ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಈಶನ ಮಹಾವಾಸ ಜಗವಿದೆಂದರಿದಿರುವ
ವಿಶ್ವಪ್ರೇಮಿ ತಂದೆ ನಿಜ ಗುರುವೆ । ಪೂರಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಶಕ್ತಿಯ ಭವ್ಯ ಮಹಾಮನೆಯ ಚೇತನವೆ
ದಿವ್ಯಲೋಕವ ತೆರೆದ ಶ್ರೀಮಹವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜದ ನೆಲೆಯರಿತಿರುವ ನಿಶ್ಚಿಂತ ನಿರ್ಮಲವೆ
ಜಗದಾಟವಾಡಿರುವ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಘನ ಶ್ರೀ ಬೆಳಕೆ ಭಾವಘನ ಭಾಸ್ಕರವೆ
ಅನುಭಾವಘನವೆನಿಪ ಬುವಿಪುಣ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರ್ತೃತ್ವ ಭಾವವನು ಕತ್ತರಿಸಿನಿಂದಿರುವ
ಕರ್ತೃತ್ವ ದೇವನದು ಎಂದುಲಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನಬುದ್ಧಿ ಚಿತ್ತುಗಳ ಸಮವಾಗಿ ನಡೆಸಿರುವ
ಘನಮನವನೊಳಕೊಂಡ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರು ಕೃಪೆಯಾಗು ॥

ಮನವು ಹೊರಗಾದರೆ ಮಾಯಾಲೋಕವೆಂದೆ
ಮನವು ಒಳಗಾದರೆ ಅವಿರಳಜ್ಞಾನಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೀಲಾವತಾರಿಯೆ ಲೀಲಾಪುಣ್ಯರೂಪ
ಲೀಲಾ ಸಮಸ್ತವೆ ಶ್ರೀಲೀಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಅರವಿಂದ ದರ್ಶನ

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು–೮೨

ವಿಶ್ವ ದಾರ್ಶನಿಕ ಮಹರ್ಷಿ ಅರವಿಂದರು ಜನ್ಮ ತಾಳಿದ ದಿನ ಆಗಸ್ಟ್ ಹದಿನೈದು. ಯೋಗೋಯೋಗವೆಂಬಂತೆ ಅದು ಭಾರತದ ಸ್ವಾತಂತ್ರ್ಯ ದಿನವೂ ಆಗಿದೆ.

ಶ್ರೀಅರವಿಂದರು ಒಬ್ಬ ಪೂರ್ಣಯೋಗಿ. ಅವರದು ಜ್ಞಾನಯೋಗ ಮಾತ್ರವಲ್ಲ, ಕರ್ಮಯೋಗ ಮಾತ್ರವಲ್ಲ, ಅಥವಾ ಭಕ್ತಿಯೋಗ ಮಾತ್ರವಲ್ಲ; ಭಕ್ತಿ-ಜ್ಞಾನ-ಕ್ರಿಯೆಗಳ ಸಂಯೋಗದ ಪೂರ್ಣಯೋಗ. ಎಂತಲೇ ಅವರು ಪರಮದಾರ್ಶಕರೆನಿಸಿದ್ದಾರೆ.

ಏಳನೆಯ ವಯಸ್ಸಿನಲ್ಲೇ ಸಾವಿರಾರು ಮೈಲಿಗಳಾಚೆಯ ಇಂಗ್ಲೆಂಡಿಗೆ ಹೋಗಿ ಅಲ್ಲಿ ಹದಿನಾಲ್ಕು ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿದ ಅರವಿಂದರದ್ದು ಪಾಶ್ಚಿಮಾತ್ಯ ಸಂಸ್ಕೃತಿಗೆ ಮಾರುಹೋಗದ, ಭಾರತೀಯ ಸಂಸ್ಕೃತಿಯ ಸಾಕಾರಮೂರ್ತಿಯಾಗಿ ತಾಯ್ನಾಡಿಗೆ ಹಿಂತಿರುಗಿದ ವಿಶಿಷ್ಟ ವ್ಯಕ್ತಿತ್ವ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಅತ್ಯಂತ ಕ್ರಿಯಾಶೀಲ ಪಾತ್ರವಹಿಸಿದ ಅರವಿಂದರು, *"ಸ್ವದೇಶವೆಂದರೆ ಒಂದು ಜಡ ಪದಾರ್ಥವೆಂದು ನಾನು ತಿಳಿದಿಲ್ಲ. ಸ್ವದೇಶ ವೆಂದರೆ ನನ್ನ ತಾಯಿ. ಅಂತೆಯೇ ಆಕೆಗೆ ಭಕ್ತಿಯಿಂದ ಪೂಜೆ ಸಲ್ಲಿಸುತ್ತೇನೆ"* ಎಂದು ತಮ್ಮ ಪತ್ನಿಗೆ ಬರೆದ ಒಂದು ಪತ್ರದಲ್ಲಿ ತಿಳಿಸಿದ್ದಾರೆ. *"ದೇಶಕಾರ್ಯವು ಈಶ ಕಾರ್ಯವೆಂದು ಭಾವಿಸಿ ದುಡಿಯಿರಿ. ಎಲ್ಲವೂ ಈಶ್ವರನ ಇಚ್ಛೆ. ನೀವು ನಿಮಿತ್ತ ಮಾತ್ರ. ಪ್ರಸಂಗ ಬಂದರೆ ಮೃತ್ಯುವನ್ನೂ ಆಲಂಗಿಸಬೇಕು"* ಎಂದು ಅಂದಿನ ತಮ್ಮ ಜೊತೆಯವರಿಗೆ ಕರೆನೀಡಿದ್ದಾರೆ. ಇಂದಿನ ಪರಿಸ್ಥಿತಿಯನ್ನು ಗಮನಿಸಿದರೆ ಅರವಿಂದರ ಮಾತುಗಳು ಅಂದಿನಷ್ಟೇ ಇಂದಿಗೂ ಪ್ರಸ್ತುತವಾಗಿವೆ ಎನ್ನಬಹುದು.

ಇಂತಹ ಉಜ್ವಲ ದೇಶಭಕ್ತಿಯ ವ್ಯಕ್ತಿ ಈಶ ಸಾಕ್ಷಾತ್ಕಾರದ ದಿವ್ಯಶಕ್ತಿಯಾದುದು, ಪರಿಪೂರ್ಣ ಆಧ್ಯಾತ್ಮಿಕ ಯೋಗಿಯಾದುದು ಒಂದು ಸೋಜಿಗದ ಸಂಗತಿ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅವರ ಸಂಪರ್ಕಕ್ಕೆ ಸಾವಿರಾರು ಜನ ರಾಜಕೀಯ ವ್ಯಕ್ತಿಗಳು ಬಂದಂತೆ, ಅನೇಕ ಸಾಧು-ಸಂತರನ್ನೂ, ತತ್ತ್ವಜ್ಞಾನಿಗಳನ್ನೂ ಅವರು ಸಂಪರ್ಕಿಸಿ, ಆಧ್ಯಾತ್ಮಿಕ ಅನುಭಾವವನ್ನು ಪಡೆದರು. ಗ್ರಂಥಾಧ್ಯಯನ, ಸಂತರ ಸಂಪರ್ಕ, ಸೆರೆಮನೆಯ ಏಕಾಂತವಾಸ – ಇವೆಲ್ಲ ಅವರನ್ನು ಅಂತರ್ಮುಖಿ ಗೊಳಿಸಿದವು. ಅಲೌಕಿಕ ಅನುಭವದತ್ತ ಅವರ ಚಿಂತನೆ ಹರಿಯ ತೊಡಗಿತು.

ಶ್ರೀ ಅರವಿಂದರು ಭಾರತದ ಜನಜಾಗೃತಿಯ ಮಹಾಮಣಿಹದಲ್ಲಿ ತೊಡಗಿದ್ದರೂ ಅವರ ಅಂತಃಸ್ಫೂರ್ತಿ ಅನಿರ್ವಚನೀಯ ಆನಂದವೊಂದರ ಅನುಭವಕ್ಕಾಗಿ ಹಾತೊರೆಯುತ್ತಲೇ ಇತ್ತು. ಬರುಬರುತ್ತಾ ಈಶ ಸಾಕ್ಷಾತ್ಕಾರವೇ ಅವರ ಪರಮಗುರಿಯಾಯಿತು. ತಮ್ಮ ಸಾಧನೆ-ಸಿದ್ಧಿ ಎರಡಕ್ಕೂ ಪಾಂಡಿಚೇರಿಯನ್ನು ನೆಲೆಯನ್ನಾಗಿ ಮಾಡಿಕೊಂಡರು. ಅವರಿಂದಾಗಿ ಇಂದು ಪಾಂಡಿಚೇರಿ ವಿಶ್ವದ ಗಮನ ಸೆಳೆದಿರುವ ಒಂದು ಮಹತ್ವಪೂರ್ಣ ಆಧ್ಯಾತ್ಮಿಕ ಕೇಂದ್ರವಾಗಿ ಬೆಳೆದು ನಿಂತಿದೆ.

ಶ್ರೀ ಅರವಿಂದರು ಭಾರತ ಸ್ವಾತಂತ್ರ್ಯದಷ್ಟೇ ಭಾರತೀಯರ ಜೀವನ ಸಂಸ್ಕೃತಿಯ ಸುಧಾರಣೆ ಮುಖ್ಯವೆಂದು ಭಾವಿಸಿದ್ದರು. ಅವರು ಹಿಡಿದ ಮಾರ್ಗ ಅಸಾಮಾನ್ಯ. ಆದರೆ ಅವರು ನುಡಿದ ಮಾತುಗಳು ಸರ್ವಮಾನ್ಯ. ಲೋಕಜೀವನಕ್ಕೆ ಬೇಕಾದ ಬೆಳಕು. ಭಾರತದ ಪಾರತಂತ್ರ್ಯ ಸ್ಥಿತಿಯ ಬಗೆಗೆ

ಅವರು ಬರೆಯುತ್ತಾ *"ನನ್ನ ಅಭಿಪ್ರಾಯದಂತೆ ನಮ್ಮ ನಿಜವಾದ ಶತ್ರುಗಳು ಯಾರಾದರೂ ಇದ್ದರೆ, ಅವರು ಹೊರಗಿನ ಜನ ಅಲ್ಲ. ನಮ್ಮ ಕರುಣಾಜನಕ ದೌರ್ಬಲ್ಯ, ನಮ್ಮ ಹೇಡಿತನ, ನಮ್ಮ ಸ್ವಾರ್ಥಡಂಭಾಚಾರಗಳು, ನಮ್ಮ ಅಂಧಶ್ರದ್ಧೆ"* ಎಂದಿದ್ದಾರೆ. ಈ ಮಾತುಗಳು ಇಂದಿನ ನಮ್ಮ ಬದುಕಿನ ಅಂತರೀಕ್ಷಣೆಗೆ ನೆರವಾಗಬೇಕು.

ನಮ್ಮ ಶಿಕ್ಷಣ ಪದ್ಧತಿಯ ಬಗೆಗೆ ಶ್ರೀ ಅರವಿಂದರು ವ್ಯಾಖ್ಯಾನಿಸುತ್ತಾ *"ನಮ್ಮ ಶಿಕ್ಷಣ ಪದ್ಧತಿ ಎಷ್ಟು ವಿಚಿತ್ರವಾಗಿದೆ? ಇಷ್ಟು ಪರಿಪೂರ್ಣವಾದ ಮಾನವ ಹತ್ಯೆಯ ಯಂತ್ರ ಜಗತ್ತಿನಲ್ಲಿ ಇನ್ನೆಲ್ಲಿಯೂ ಸಿಕ್ಕಲಾರದು. ಬಹಳವೇನು, ಅತ್ಯಂತ ಪವಿತ್ರವೂ, ಮೌಲಿಕವೂ ಆಗಿರುವ ಮಾನವೀ ತೇಜಗ್ನಿಯನ್ನೇ ಪೂರ್ಣ ವಾಗಿ ಇಲ್ಲದಂತೆ ಮಾಡಿಬಿಡುವ ಸಾಮರ್ಥ್ಯ ಈ ಯಂತ್ರಕ್ಕಿದೆ"* ಈ ಮಾತುಗಳನ್ನು ಬಹುತೇಕ ಶಿಕ್ಷಣತಜ್ಞರು ಒಪ್ಪಿಕೊಂಡಿದ್ದರೂ, ತಪ್ಪನ್ನು ತಿದ್ದುವ ಕೆಲಸ ಇನ್ನೂ ಆಗಬೇಕಾಗಿದೆ. ನಮ್ಮ ಶಿಕ್ಷಣ ನೀತಿ ನಿರೂಪಕರು ಶ್ರೀ ಅರವಿಂದರ ನುಡಿಗಳನ್ನು ಗಮನಿಸುವುದು ಅಗತ್ಯ. ಶ್ರೀ ಅರವಿಂದರ ಮಾತುಗಳು ಕೇವಲ ಅಕ್ಷರ ಸಂಯೋಜನೆಯ ಸಮೂಹವಲ್ಲ, ಶಿಕ್ಷಣ ಸುಧಾರಣೆಯ ಸಂಜೀವಿನಿ ಸೂತ್ರಗಳು. ವ್ಯಕ್ತಿಯ ಅಂತರಂಗ ಚೇತನಕ್ಕೆ ಸಂಬಂಧಿಸಿದ ಶಿಕ್ಷಣ ಪ್ರತಿಕೂಲ ಪರಿಣಾಮವನ್ನೇ ಉಂಟು ಮಾಡುತ್ತದೆ ಎಂಬುದು ಶ್ರೀ ಅರವಿಂದರ ವಿಚಾರ.

*"ಶಕ್ತಿ ಸಮುದ್ರದಲ್ಲಿ ಜ್ಞಾನಸೂರ್ಯನ ಕಿರಣಗಳು ಬೀಳಲಾರಂಭಿಸಿದವೆಂದರೆ, ಆ ತೇಜಸ್ವಿ ಕ್ಷೇತ್ರದಲ್ಲಿ ಅನಂತ ಪ್ರೇಮ, ಆನಂದ, ಐಕ್ಯ ಇವುಗಳ ಸಾಮ್ರಾಜ್ಯ ಪ್ರಸರಣದ ದರ್ಶನವಾಗುತ್ತದೆ. ಪ್ರತಿಯೊಬ್ಬರೂ ದೇವಜೀವನವನ್ನು ಗಳಿಸಿಕೊಳ್ಳಬೇಕೆಂಬುದು ನನ್ನ ಇಚ್ಛೆ"* ಎಂಬ ಶ್ರೀ ಅರವಿಂದರ ಮಾತುಗಳನ್ನು ನಾವು ಅರ್ಥಮಾಡಿಕೊಳ್ಳಬೇಕು.

"ಪ್ರತಿಯೊಂದು ವಸ್ತುವಿನಿಂದಲೂ ನಾವು ಆನಂದ ಪಡೆಯುವಂತಾಗಬೇಕು. ಈ ದೇಹವು ಚೈತನ್ಯಮಯ. ಈ ಜಗತ್ತಿನೊಳಗಿನ ಪ್ರತ್ಯೇಕ ವ್ಯಕ್ತಿಗಳೆಂದರೆ ಈಶ್ವರನ ಒಂದೊಂದು ಸ್ವರೂಪ. ಸರ್ವಕಾರ್ಯಗಳಲ್ಲಿ ಈಶ್ವರ ಭಾವವು ಉತ್ಪನ್ನ ವಾಗುವುದರಿಂದ ಅದು ವಿಕಾಸಹೊಂದುತ್ತಾ ಹೋಗುತ್ತದೆ. ದೇವರು ಮತ್ತಾರು ಅಲ್ಲ, ಮತ್ತೆಲ್ಲಿಯೂ ಇಲ್ಲ. ಮನುಷ್ಯನ ಅಂತರಂಗದಲ್ಲೇ ದೇವನ ವಾಸ್ತವ್ಯ. ಅವನನ್ನು ಪ್ರಕಟಗೊಳಿಸು ವುದೇ ದೇವಜೀವನದ ಉದ್ದೇಶ" ಎನ್ನುತ್ತಾರೆ ಶ್ರೀ ಅರವಿಂದರು. ವ್ಯಕ್ತಿಯ ಉದಾತ್ತೀಕರಣವೇ ಅವರ ಮುಖ್ಯ ಆಶಯವಾಗಿತ್ತು.

ಅಖಂಡ ಭಾರತದ ಬಗ್ಗೆ ಅನಂತರ ನಿರೀಕ್ಷೆ ಇಟ್ಟು ಕೊಂಡಿದ್ದ ಶ್ರೀ ಅರವಿಂದರ ಅಮರವಾಣಿ ಆಧುನಿಕ ಭಾರತ ನಿರ್ಮಾಪಕರಿಗೆ ದಾರಿದೀಪವಾಗಬೇಕು.

## ಶ್ರೀಮಠಕ್ಕೆ ರಾಜ್ಯಪಾಲರ ಭೇಟಿ

ಕರ್ನಾಟಕದ ಸನ್ಮಾನ್ಯ ರಾಜ್ಯಪಾಲರಾದ ಶ್ರೀಮತಿ ವಿ.ಎಸ್. ರಮಾದೇವಿ ಅವರು ಜೂನ್ ೭ರಂದು ಶ್ರೀಮಠಕ್ಕೆ ಭೇಟಿನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಮಾಡಿ ದಿವ್ಯಾಶೀರ್ವಾದ ಪಡೆದರು. ರಾಜ್ಯಪಾಲರು ದಾಸೋಹ ಮಂದಿರ, ವಿದ್ಯಾರ್ಥಿನಿಲಯಗಳಿಗೆ ಭೇಟಿ ನೀಡಿ ವೀಕ್ಷಿಸಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ರಾಜ್ಯಪಾಲರ ಜೊತೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್, ಜಿಲ್ಲಾಧಿಕಾರಿ ಶ್ರೀ ಬಿ.ಆರ್. ಜಮಯರಾಮರಾಜೇ ಅರಸ್, ಜಿಲ್ಲಾಪಂಚಾಯತಿಯ ಅಧ್ಯಕ್ಷೆ ಶ್ರೀಮತಿ ದಾಕ್ಷಾಯಣಮ್ಮ ಅಶ್ವಥ್, ಶಾಸಕ ಶ್ರೀ ಎಸ್. ಶಿವಣ್ಣ ಮೊದಲಾದ ಗಣ್ಯರಿದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರು ರಾಜ್ಯಪಾಲರಿಗೆ ಫಲತಾಂಬೂಲ ನೀಡಿ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.





# ಅಲ್ಲಮಪ್ರಭು

*– ಲಿಂ. ಡಾ॥ ಎಚ್. ತಿಪ್ಪೇರುದ್ರಸ್ವಾಮಿ*

### ೧. ಜೀವನ ಚರಿತ್ರೆ

ಕರ್ನಾಟಕ ಮಹತ್ಸಾಧನೆಯ ಇತಿಹಾಸದಲ್ಲಿ ಅಲ್ಲಮಪ್ರಭು ಎಂಬುದು ಬಹುದೊಡ್ಡ ಹೆಸರು. ಯುಗಪ್ರವರ್ತಕ ಶಕ್ತಿಯಾಗಿ ಕಂಗೊಳಿಸಿದ ಮಹಾವ್ಯಕ್ತಿ ಆತ. ಅಲ್ಲದೆ ವ್ಯಕ್ತಿತ್ವದ ಮಿತವಲಯ ವನ್ನು ಮೀರಿನಿಂತು ಮಾನವತೆಯು ಸಾಧಿಸಬಹುದಾದ ಅತ್ಯುನ್ನತವಾದ ನಿಲುವನ್ನು ಸಹಜಸ್ಥಿತಿಯಾಗಿ ಅಳವಡಿಸಿಕೊಂಡು ಅದನ್ನು ಜಗತ್ಕಲ್ಯಾಣಕ್ಕಾಗಿ ಸಾರಿದವನು ಅಲ್ಲಮಪ್ರಭು. ಪ್ರಸಿದ್ಧಿಯ ದೃಷ್ಟಿಯಿಂದ ಇಂದು ಕೇವಲ ಕನ್ನಡದೇಶಕ್ಕೆ ಅದು ಸೀಮಿತವಾಗಿದ್ದರೂ ಯೋಗ್ಯತೆಯ ದೃಷ್ಟಿಯಿಂದ ವಿಶ್ವವ್ಯಾಪಕ ವಾಗಬಲ್ಲ ಮಹತ್ವವನ್ನು ಪಡೆದಿದೆ.

ಮಾನವ ಜೀವನದ ಚಿರಂತನವಾದ ಸಮಸ್ಯೆಗೆ ಅಲ್ಲಮ ಪ್ರಭು ಶಾಶ್ವತವಾದ ಉತ್ತರವನ್ನು ಕೊಟ್ಟಿದ್ದಾನೆ. ಆತನ ವಚನ ಗಳಲ್ಲಿ ಅಭಿವ್ಯಕ್ತಗೊಂಡಿರುವ ವ್ಯಕ್ತಿತ್ವ ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ ಅನ್ವಯಿಸಬಹುದಾದಷ್ಟು ವ್ಯಾಪಕವಾದುದು, ಉಜ್ವಲವಾದುದು. ಆತನ ಕಾಲ ೧೨ನೆಯ ಶತಮಾನ; ಅಂದರೆ ಸುಮಾರು ಎಂಟುನೂರು ವರ್ಷಗಳಷ್ಟು ಹಿಂದೆ ಬಾಳಿಬದುಕಿ ದವನು. ಈ ಎಂಟುನೂರು ವರ್ಷಗಳಲ್ಲಿ ಇಂದು ಮಾನವನು ತನ್ನ ಬಹುಮುಖವಾದ ವಿಕಾಸಮಾರ್ಗದಲ್ಲಿ ಮುಂದೆ ನಡೆದಿದ್ದಾನೆ. ಆತನ ಅನುಭವ ಜ್ಞಾನಗಳು ಶ್ರೀಮಂತವಾಗಿವೆ. ಜೀವನದ ರೀತಿ ನೀತಿಗಳು ಎಷ್ಟೋ ಬದಲಾವಣೆಯನ್ನು ಪಡೆದಿವೆ. ಇಂದಿನ ವೈಜ್ಞಾನಿಕ ಯುಗದಲ್ಲಿಯಂತೂ ಹಳೆಯ ಶ್ರದ್ಧೆಗಳು ಕುಸಿಯುತ್ತಿವೆ. ಎಲ್ಲವನ್ನೂ ಪ್ರಯೋಗ ಪರೀಕ್ಷೆಗಳಿಗೆ ಒಳಪಡಿಸಿ ಒರೆಗೆ ಹಚ್ಚಿನೋಡುವ ಚಿಕಿತ್ಸಕ ಬುದ್ಧಿ ಬೆಳೆಯುತ್ತಿವೆ. ಇವೆಲ್ಲವನ್ನೂ ಅಳವಡಿಸಿಕೊಂಡ ಆಧುನಿಕ ಮನಸ್ಸುಗಳಿಗೂ ಅಚ್ಚರಿಯನ್ನುಂಟು ಮಾಡುವ ಸ್ವತಂತ್ರ ವಿಚಾರಶಕ್ತಿಯನ್ನು ಅಲ್ಲಮನ ವಚನಗಳಲ್ಲಿ ಕಾಣುತ್ತೇವೆ. ಆದುದರಿಂದಲೇ ಇಂದಿನ ವಿಚಾರವಂತರಿಗೆ ಅಲ್ಲಮಪ್ರಭು ಬಹಳ ಪ್ರಿಯನಾಗಿ ಪರಿಣಿಸುತ್ತಾನೆ.

ಅವನ ವಿಚಾರಧಾರೆಯಿಂದ ಅಂದು ಧರ್ಮಕೊಂದು ಹೊಸ ಕಾಂತಿ ಲಭಿಸಿತು; ಅವನ ಆ ಧೀರ ವ್ಯಕ್ತಿತ್ವ ಕಲ್ಯಾಣದ ಧಾರ್ಮಿಕ ಕ್ರಾಂತಿಗೆ ಬೆನ್ನೆಲುಬಾಗಿ ನಿಂತಿತು. ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಒಂದು ದೊಡ್ಡ ಧಾರ್ಮಿಕ ಕ್ರಾಂತಿ ನಡೆದು, ಅದು ಒಂದು ದೃಷ್ಟಿಯಿಂದ ಇಡೀ ಭರತಖಂಡದ ಧಾರ್ಮಿಕ ಇತಿಹಾಸದಲ್ಲಿಯೇ ಅದ್ವಿತೀಯ ವಾಗಿ ನಿಲ್ಲುವಂತಾಯಿತು. ಅದುವರೆಗೂ ಕೇವಲ ಕೆಲವರ ಸ್ವತ್ತಾಗಿದ್ದ ಧರ್ಮ, ಅಂದು ಜನಸಾಮಾನ್ಯರನ್ನು ಉದ್ಧರಿಸುವ ಮಹಾಪೂರವಾಗಿ ಭೋರ್ಗರೆಯಿತು. ಅದಕ್ಕೆ ಕೇಂದ್ರಶಕ್ತಿ ಯಾಗಿ ನಿಂತು ಅದನ್ನು ನಿರ್ವಹಿಸಿದವರು ಬಸವಣ್ಣನವರು.

ಮೊದಲು ಮಂಗಳವಾಡದಲ್ಲಿ ಅನಂತರ ಕಲ್ಯಾಣದಲ್ಲಿ ಕಳಚೂರ್ಯ ಬಿಜ್ಜಳನ ಬಳಿಯಲ್ಲಿ ಬಸವಣ್ಣನವರು ಮಂತ್ರಿಗಳಾಗಿದ್ದರು. ರಾಜಕೀಯದ ಅಧಿಕಾರ ಒಂದು ಕಡೆ, ಅತ್ಯುನ್ನತವಾದ ಆಧ್ಯಾತ್ಮಿಕ ಆದರ್ಶ ಇನ್ನೊಂದು ಕಡೆ, ಇವೆರಡರ ಅಪೂರ್ವ ಸಂಗಮವನ್ನು ಸಾರ್ಥಕಪಡಿಸುವಂತಹ ಸಾಧನೆಯ ಕರ್ತೃತ್ವಶಕ್ತಿ; ಮತ್ತು ಜನತೆಯ ಮನಸ್ಸನ್ನು ಮುಟ್ಟಿ ಅದನ್ನು ಎಚ್ಚರಗೊಳಿಸಬಲ್ಲ ಕಾವ್ಯಶಕ್ತಿ – ಹೀಗೆ ಬಹುಮುಖವಾದ ಪ್ರತಿಭೆಯನ್ನು ಬಸವಣ್ಣನವರು ಬಹುದೊಡ್ಡ ಪ್ರಭಾವವನ್ನು ಅಂದಿನ ಸಮಾಜದ ಮೇಲೆ ಬೀರಲು ಸಮರ್ಥರಾದರು. ಬಸವಣ್ಣನವರ ಸ್ವತಂತ್ರ ಮನೋಧರ್ಮದ ಈ ವಿಚಾರ ಕ್ರಾಂತಿಗೆ ತನ್ನ ಜ್ಞಾನ ವೈರಾಗ್ಯಗಳ ಕ್ರಾಂತಿಯನ್ನಿತ್ತು ಅದನ್ನು ಮುನ್ನಡೆಸಿದವನು ಅಲ್ಲಮಪ್ರಭು. ಅವರಿಬ್ಬರೂ ಆ ಯುಗದ ಎರಡು ಮಹಾಶಕ್ತಿಗಳು.

ಅಲ್ಲಮಪ್ರಭುವಿನ ಅದ್ವಿತೀಯ ಮೂರ್ತಿಸ್ವರೂಪವನ್ನೂ ಬಸವಣ್ಣನವರ ಕಾರ್ಯಕ್ಷೇತ್ರದಲ್ಲಿ ಆತನು ವಹಿಸಿದ ಪಾತ್ರವನ್ನೂ ನೋಡುವುದಕ್ಕೆ ಮೊದಲು ಆತನ ಜೀವನವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಆವಶ್ಯಕ. ವಚನಗಳಲ್ಲಿ ಮೂಡಿನಿಂತ ಆತನ ವ್ಯಕ್ತಿತ್ವವನ್ನು ಕಂಡ ಓದುಗರಿಗೆ ಆತನ ಜೀವನವನ್ನೂ ಸಾಧನೆಯನ್ನೂ ತಿಳಿಯಬೇಕೆಂಬ ಕೂತೂಹಲ ಸಹಜವಾಗಿಯೇ ಉಂಟಾಗುತ್ತದೆ. ಆದರೆ ಆತನ ಜೀವನದ ವಿಚಾರವಾಗಿ ನಿರ್ದಿಷ್ಟವಾಗಿ ಹೇಳಬಹುದಾದ ಚಾರಿತ್ರಿಕ ಅಂಶಗಳು ತಿಳಿದಿರುವುದು ತೀರಾ ಕಡಿಮೆ. ಅವನನ್ನು ಕುರಿತು ಕನ್ನಡ, ತೆಲುಗು, ತಮಿಳು, ಸಂಸ್ಕೃತ ಮತ್ತು ಮರಾಠಿಗಳಲ್ಲಿ ರಚಿತವಾಗಿರುವ ಕಾವ್ಯಗಳು ಆತನ ಮಹತ್ವವನ್ನೂ ವ್ಯಕ್ತಿತ್ವವನ್ನು

ಸಾಂಕೇತಿಕವಾಗಿ ನಿರೂಪಿಸಲು ಪ್ರಯತ್ನಿಸಿವೆಯೇ ಹೊರತು ಚಾರಿತ್ರಿಕವಾದ ಅಂಶಗಳಿಗೆ ವಿಶೇಷವಾದ ಗಮನವನ್ನು ಕೊಟ್ಟಂತೆ ತೋರುವುದಿಲ್ಲ. ಹರಿಹರನು ಬರೆದಿರುವ "ಪ್ರಭುದೇವರ ರಗಳೆ"ಯಾಗಲಿ, ಚಾಮರಸನ "ಪ್ರಭುಲಿಂಗ ಲೀಲೆ"ಯಾಗಲಿ, ಅಲ್ಲಮನನ್ನು ಕುರಿತ ಚರಿತ್ರೆಗಳಲ್ಲ. ಅಲ್ಲಲ್ಲಿ ಚಾರಿತ್ರಿಕ ಅಂಶಗಳು ಸುಳಿಯಬಹುದು. ಆದರೆ ಆತನ ಜೀವನ ಚರಿತ್ರೆಯನ್ನು ಬರೆಯುವಂತಹ ಖಚಿತವಾದ ಸಾಮಗ್ರಿಗಳನ್ನು ಅವು ಒದಗಿಸುವುದಿಲ್ಲ. ಅಲ್ಲದೆ ಆತನ ವಚನಗಳಲ್ಲಿಯೂ ಸ್ವವಿಷಯದ ಬಗೆಗೆ ಹೆಚ್ಚು ಸಿಗುವುದಿಲ್ಲ. ಲೌಕಿಕ ವ್ಯಕ್ತಿತ್ವವನ್ನು ದಾಟಿದ ಅತೀತ ನಿಲುವಿನಲ್ಲಿಯೇ ನಿಂತಿವೆ ಆತನ ವಚನಗಳು. ಆದರೂ ಆ ವಚನಗಳಲ್ಲಿ ರೂಪುಗೊಂಡ ಆತನ ವ್ಯಕ್ತಿತ್ವದ ಹಿನ್ನೆಲೆಯನ್ನು ಗಮನಿಸಿ ಮತ್ತು ಅವನನ್ನು ಕುರಿತು ಕಾವ್ಯಗಳಲ್ಲಿ ಬರುವ ಕೆಲವು ಅಂಶಗಳನ್ನು ಆಧರಿಸಿ, ಆತನ ಜೀವನವನ್ನು ಒಂದೆರಡು ಮಾತುಗಳಲ್ಲಿ ಹೇಳಬಹುದು.

ಇಂದು ಶಿವಮೊಗ್ಗ ಜಿಲ್ಲೆಯಲ್ಲಿ ಒಂದು ಹಳ್ಳಿಯಾಗಿ ಉಳಿದಿರುವ ಬಳ್ಳಿಗಾವೆ ಅಲ್ಲಮಪ್ರಭುವಿನ ಜನ್ಮಸ್ಥಳ. ತಂದೆ ನಿರಹಂಕಾರ, ತಾಯಿ ಸುಜ್ಞಾನಿ. ಇವು ತಂದೆತಾಯಿಗಳ ನಿಜವಾದ ಹೆಸರುಗಳೋ ಅಥವಾ ನಿರಹಂಕಾರ ಮತ್ತು ಸುಜ್ಞಾನಗಳಿಂದ ಮಾತ್ರ ಅಲ್ಲಮಪ್ರಭುವಿನಂತಹ ವ್ಯಕ್ತಿತ್ವ ಮೂಡಬಲ್ಲುದೆಂಬ ಸಾಂಕೇತಿಕವಾದ ಸೂಚನೆಯೋ ತಿಳಿಯದು. ಅಂತೂ ಪ್ರಭುದೇವನ ತಂದೆ ಬಳ್ಳಿಗಾವೆಯಲ್ಲಿ "ನಾಗವಾಸಾಧಿಪತಿ"ಯಾಗಿದ್ದನೆಂಬ ಮಾತು ಬರುತ್ತದೆ.

ಇವನ ಬಾಲ್ಯಜೀವನದ ಪರಿಸರಗಳಾಗಲಿ, ಮನೋವಿಕಾಸದ ಚಿತ್ರವಾಗಲಿ ನಮಗೆ ಕಾಣಸಿಗದು. ಆದರೆ ಈತನ ಜೀವನದಲ್ಲೊಂದು ಪರಿವರ್ತನೆಯ ಘಟ್ಟ ತಾರುಣ್ಯದಲ್ಲಿ ಪ್ರಾಪ್ತವಾದಂತೆ ತೋರುತ್ತದೆ. ಅದು ಹರಿಹರ ಹೇಳುವಂತೆ ಬಳ್ಳಿಗಾವೆಯ ಕಾಮಲತೆಯೇ ಆಗಿರಲಿ ಅಥವಾ ಚಾಮರಸ ಹೇಳುವಂತೆ ಬನವಾಸಿಯ ಮಾಯಾದೇವಿಯೇ ಆಗಿರಲಿ ಅಂತೂ ಸಂಸಾರವನ್ನೂ ಮೆಟ್ಟಿ ಮೇಲೇರುವ ಸಾಧನೆಗೆ ಪ್ರಭುವನ್ನು ಪ್ರಚೋದಿಸಿದ ಒಂದು ಘಟನೆ ನಡೆದಿರಬೇಕು. ಆದರಿಂದ ಪ್ರಭುದೇವನಿಗೆ ತನ್ನ ಹೃದಯದ ಅಂತರಾಳದಲ್ಲಿ ಅಡಗಿದ್ದ ಅತೀವವಾದ ಆಕಾಂಕ್ಷೆಯ ಅರಿವು ಆದಂತೆ ತೋರುತ್ತದೆ. ಮುಂದೆ ಆತನ ವಚನಗಳಲ್ಲಿ ನಾವು ಕಾಣುವಂತೆ ಜ್ಞಾನ ವೈರಾಗ್ಯಗಳು ಮೊದಲಿನಿಂದಲೂ ಆತನ ಜೀವನದಲ್ಲಿ ಉಸಿರಾಟದಂತೆ ಸಹಜವಾಗಿದ್ದುವು. ಆ ತನ್ನ ಸಹಜ ಸ್ವರೂಪದ ವಿಕಾಸಕ್ಕಾಗಿ ಹಂಬಲಿಸಿತು ಪ್ರಭುವಿನ ಮನಸ್ಸು. ಎಲ್ಲರಂತೆ ಈ ಸಂಸಾರದ ವಿಷಯ ಸುಖಗಳಲ್ಲಿ ಆನಂದವನ್ನು ಪಡೆಯಲಾರದೆ ಹೋಯಿತು. ಆದುದರಿಂದ ಇದನ್ನು ತ್ಯಜಿಸಿ ಅಗಾಧವಾದ ಸಾಧನೆಯನ್ನು ಆತ ಕೈಕೊಂಡಂತೆ ತೋರುತ್ತದೆ.

ಅದು ಅಲ್ಲಮಪ್ರಭುವಿನ ಜೀವನದಲ್ಲಿ ನಾವು ಸ್ಪಷ್ಟವಾಗಿ ಕಾಣಲಾಗದ ಭಾಗ. ಎಲ್ಲ ಸಾಧಕರ ಜೀವನದಲ್ಲಿಯೂ ಬರುವ ಒಂದು ಕಾಳರಾತ್ರಿ ಅದು. (Dark Night of the Soul) ಆನಂದದ ಮುಬೆಳಗಿಗಾಗಿ ಹಂಬಲಿಸುವ ಹೋರಾಟವನ್ನೂ ತಳಮಳವನ್ನೂ ಅಲ್ಲಿ ಕಾಣುತ್ತೇವೆ. ಪ್ರಭುದೇವನೂ ಅಂತಹ ಸ್ಥಿತಿಯನ್ನು ಅನುಭವಿಸಿ, ತನ್ನ ಸಾಧನೆಯಿಂದ ಅದನ್ನು ದಾಟಿ ಮೇಲೇರಿರಬೇಕು.

ಬಸಣ್ಣನವರ ವಚನಗಳಲ್ಲಿ ಆ ತಳಮಳದ ವಿವಿಧ ರೀತಿಗಳನ್ನೂ ಮತ್ತು ಅದು ಆ ಕತ್ತಲಿನಲ್ಲಿಯೂ ದಾರಿತಪ್ಪದೆ ದೃಢವಾದ ಹೆಜ್ಜೆಗಳಿಂದ ಮುಂಬೆಳಗಿನತ್ತ ಸಾಗಿರುವ ಸಂಪೂರ್ಣ ಚಿತ್ರವನ್ನೂ ಕಾಣುತ್ತೇವೆ. ಆದರೆ ಅಲ್ಲಮಪ್ರಭುವಿನ ವಚನಗಳಲ್ಲಿ ಅದನ್ನು ಅಷ್ಟಾಗಿ ಕಾಣುವುದಿಲ್ಲ. ಆದರೂ ಅಂತಹ ಒಂದು ಸ್ಥಿತಿಯನ್ನು ದಾಟಿ ಬಂದಿರುವುದನ್ನು ಕಂಡುಕೊಳ್ಳುವುದಕ್ಕೆ ಸಾಕಷ್ಟು ಸೂಚನೆಗಳಿವೆ :

*ಎಸೆಯದಿರು ಎಸೆಯದಿರು, ಕಾಮ, ನಿನ್ನ ಬಾಣ*
*ಹುಸುಯಲೇಕೋ?*
*ಕಾಮಕ್ರೋಧ ಲೋಭ ಮೋಹ ಮದ ಮತ್ಸರ ಇದು*
*ಸಾಲದೇ ನಿನಗೆ?*
*ಗುಹೇಶ್ವರಲಿಂಗದ ವಿರಹದಲ್ಲಿ ಬೆಂದವರ*
*ಮರಳಿ ಸುಡಲುಂಟೇ ಮರುಳು ಕಾಮಾ (೧೪೭)*

ಇಂತಹ ಮಾತುಗಳಲ್ಲಿ ಅದನ್ನು ಕಾಣುತ್ತೇವೆ. ಒಮ್ಮೆ ಮನ್ಮಥ ಈತನ ಮೇಲೆ ಬಾಣವನ್ನು ಪ್ರಯೋಗಿಸಲು ಪ್ರಯತ್ನಿಸಿರಬಹುದು. ಅದು ಕಾಮಲತೆಯೋ, ಮಾಯಾದೇವಿಯೋ ಯಾರೇ ಆಗಿರಲಿ ಈ ಬಾಣಕ್ಕೆ ಆತನ ಮನಸ್ಸು ಸ್ವಲ್ಪ ಅಳುಕಿರಬೇಕು. ಆದರೆ ಅಷ್ಟರಲ್ಲಿ ಎಚ್ಚೆತ್ತುಕೊಂಡು ಹೇಳುತ್ತಾನೆ; *"ಎಲೈ ಕಾಮಾ ನಿನ್ನ ಬಾಣವನ್ನು ನನ್ನ ಮೇಲೆ ಪ್ರಯೋಗಿಸಬೇಡ. ಅವು ಏಕೆ ವ್ಯರ್ಥವಾಗಬೇಕು? ಗುಹೇಶ್ವರನ ವಿರಹದುರಿಯಲ್ಲಿ ಬೆಂದಿರುವ ನನ್ನನ್ನು ನೀವು ಮತ್ತೊಮ್ಮೆ ಸುಡುವುದು ಸಾಧ್ಯವೆ?"* – ಎಂಬ ಆತ್ಮದ ಎಚ್ಚರಿಕೆಯ ನುಡಿ ಅಲ್ಲಿ ಕಾಣುತ್ತದೆ. ಅಲ್ಲದೆ ಇನ್ನೊಂದು ಕಡೆಯಲ್ಲಿ ಬರುವ *"ಗೊಹೇಶ್ವರನ ವಿರಹದುರಿಯೊಳಗೆ ಬೆಂದವರ, ಮರಳಿ ಸುಟ್ಟಹೆನೆಂಬ ಸಿದ್ಧರಾಮಯ್ಯ ಮರುಳೆ ನೋಡಯ್ಯ"* ಎಂಬ ಆತನ ಮಾತು ಕೂಡಾ ಕಠಿಣವಾದ ಆತನ ಸಾಧನೆಗೆ ಸಾಕ್ಷಿಯಾಗಿದೆ.





ಅಲ್ಲದೆ ಆತನಲ್ಲಿ ಕಾಣುವ ಯೋಗಸಮನ್ವಯದ ಅಪೂರ್ವ ಸಿದ್ಧಿ ಆಶ್ಚರ್ಯಕರವಾದುದು. ಹಠಯೋಗ ರಾಜಯೋಗ ಮೊದಲಾದ ಎಲ್ಲ ಯೋಗಗಳಲ್ಲಿಯೂ ಆತನು ನಡೆದು ಅವುಗಳ ಆಚೆಗೆ ಶಿವಯೋಗದತ್ತ ಸಾಗಿದುದರ ಸ್ಪಷ್ಟವಾದ ಕಲ್ಪನೆಯನ್ನು ಅವನ ವಚನಗಳು ನಮಗೆ ತಂದುಕೊಡುತ್ತವೆ. ಅವನ ವಚನಗಳನ್ನು ನೋಡಿದರೆ ಅಲ್ಲಿ ಕಂಡುಬರುವ ಅದ್ಭುತವಾದ ಶಕ್ತಿ ಮತ್ತು ಅಗಾಧವಾದ ಅನುಭವಗಳ ಪರಿಚಯ ನಮಗಾಗುತ್ತದೆ. ಪರಿವ್ರಾಜಕ ಸಂನ್ಯಾಸಿಯಾಗಿ ಭರತಖಂಡದ ಆದ್ಯಂತವೂ ಆತ ಸಂಚರಿಸಿರಬೇಕು. ನೂರಾರು ಸಾಧಕರನ್ನು ಸಂಧಿಸಿ ಅನೇಕ ಬಗೆಯ ಅನುಭವಗಳನ್ನು ಪಡೆದಿರಬೇಕು. ಆದರೆ ಯಾವುದೂ ಆತನಿಗೆ ಪೂರ್ಣತೃಪ್ತಿಯನ್ನು ಕೊಟ್ಟಂತೆ ತೋರುವುದಿಲ್ಲ. ಭೂಮವಾದುದನ್ನು ಬಯಸಿದವನು ಆತ. ಆ ಅನುಭವವನ್ನು ಆಧ್ಯಾತ್ಮದಲ್ಲಿ ಆತನಿಗೆ ತಂದುಕೊಟ್ಟವನು ಅನಿಮಿಷಯೋಗಿ. ಶಿವಯೋಗದ ನಿಲುವನ್ನು ಈತನಿಂದ ಅಲ್ಲಮನು ಅರಿತುಕೊಂಡನು. ಎಲ್ಲ ಯೋಗಗಳ ರಹಸ್ಯವನ್ನೂ ಅರಿತ ಅಲ್ಲಮಪ್ರಭುವಿನ ಸಾಧನೆಯ ಕೊನೆಯ ಹಂತದಲ್ಲಿ ಅನಿಮಿಷ ಯೋಗಿಯ ದರ್ಶನವಾಯಿತೆಂದು ಭಾವಿಸಬಹುದು. ಈ ಸನ್ನಿವೇಶವನ್ನು ಶೂನ್ಯಸಂಪಾದನೆ ಬಹಳ ಚೆನ್ನಾಗಿ ಚಿತ್ರಿಸಿದೆ.

ಅರಸುವ ಬಳ್ಳಿಯು ಕಾಲನ್ನು ಸುತ್ತಿದಂತೆ, ಬಯಸುವ ಬಯಕೆ ಕೈಸಾರುವಂತೆ, ಬಡವ ಸಂಪತ್ತನ್ನು ಎಡಹಿಕಂಡಂತೆ, ಪ್ರಭುದೇವನು ಮಣ್ಣಮರೆಯ ದೇಗುಲದಲ್ಲಿ ಭಾವಕ್ಕಗಮ್ಯನಾದ ಅನಿಮಿಷಯೋಗಿಯೆಂಬ ಮಾಣಿಕ್ಯವನ್ನು ಕಾಣುತ್ತಾನೆ. ತನ್ನ ಒಳ ಹೊರಗೆ ಬೆಳಗುವ ಪರಮ ಪ್ರಕಾಶಮಯವಾದ ಜ್ಯೋತಿಯನ್ನೇ ಅಲ್ಲಿ ಕಂಡಂತಾಗುತ್ತದೆ. ಅಲ್ಲಿ ತನ್ನ ಸಾಧನೆಯ ಪರಮ ಗಂತವ್ಯವನ್ನು ಗುರುತಿಸುತ್ತಾನೆ. ಮತ್ತು ಆತನಿಂದ ಉಪದೇಶವನ್ನು ಪಡೆಯಲು ಅನುವಾಗುತ್ತಾನೆ. ಆ ಉಪದೇಶವಾದರೂ ಎಂತಹುದು? *"ಕೇಳಲಿಲ್ಲದ ಕರ್ಣಮಂತ್ರ, ತುಂಬಿತುಳುಕದ ಕಳಶಾಷೇಕ; ಆಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ"*. ಹೀಗೆ ಜ್ಞಾನಲಿಂಗೋಪದೇಶ ನಡೆಯುತ್ತದೆ. ಮಾತಿಗೆ ಮೀರಿದ ಅನುಭವವನ್ನು ಅನಿಮಿಷಯೋಗಿ ತನ್ನ ನೋಟದಿಂದಲೇ ಪ್ರಭುವಿನ ಹೃದಯದಲ್ಲಿ ನಿರಿಸುತ್ತಾನೆ. ಸತತ ಸಾಧನೆಯಿಂದ ಜಾಗ್ರತಗೊಂಡ ಹೃದಯಕ್ಕೆ ಅನಿಮಿಷಯೋಗಿಯಂತಹವನ ಒಂದೇ ನೋಟ ಸಾಕೆಂದು ತೋರುತ್ತದೆ – ಪೂರ್ಣತೆಯನ್ನು ತಂದುಕೊಡುವುದಕ್ಕೆ. ಇದನ್ನು *"ಮೂಗರ ಮೂಗರ ಪ್ರಸಂಗದಂತೆ"* ಎಂದು ವರ್ಣಿಸಿರುವುದು ಅರ್ಥವತ್ತಾಗಿದೆ.

ಕೊನೆಗೆ ಅನಿಮಿಷಯೋಗಿಯ ಕರಸ್ಥಲದ ಲಿಂಗ ಪ್ರಭುದೇವನ ಹಸ್ತಪೀಠವನ್ನು ಸೇರುತ್ತದೆ. *"ಗುಹೇಶ್ವರನೆಂಬ ಲಿಂಗವು ನಿರಾಕಾರವಾದ ಬಯಲು, ಅದು ಸಾಕಾರವಾಗಿ ಮುನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ, ಕೇಳಲಮ್ಮೆ"* ಎಂದು ಇಷ್ಟಲಿಂಗದ ಮಹತ್ತಿನಲ್ಲಿ ಪರವಶವಾಗುತ್ತದೆ ಆತನ ಮನಸ್ಸು. ಅವನ ಅಂಗವೆಲ್ಲಾ ನಷ್ಟವಾಗಿ, ಲಿಂಗದಲ್ಲಿ ಲೀಯವಾಗುತ್ತದೆ. ದೀಪವನ್ನು ಮುಟ್ಟಿದ ದೀಪದಂತೆ, ಪೂರ್ಣತೆಯನ್ನು ಪಡೆದು ತಾನೂ ಪರಿಪೂರ್ಣನಾಗಿ ಪರಿಣಮಿಸುತ್ತಾನೆ. ನಿಜವನರಿದ ನಿಶ್ಚಿಂತ, ಮರಣವ ಗೆಲಿದ ಮಹಾಂತ, ಘನವನೊಳಕೊಂಡ ಮಹಿಮ, ಪರವನೊಳಕೊಂಡ ಪರಿಣಾಮಿ, ಮತ್ತು ಬಯಲಲ್ಲಿ ಒದಗಿದ ಭರಿತನಾದ ಗುರುಸ್ವರೂಪನೇ ತಾನಾಗಿ ಪರಿಣಮಿಸುತ್ತಾನೆ.

ಇದು ಪ್ರಭುದೇವನ ಜೀವನದಲ್ಲಿ ಪ್ರಮುಖವಾದ ಒಂದು ಘಟ್ಟ. ಇಲ್ಲಿಂದ ಮುಂದೆಲ್ಲಾ ತಾನು ಸಾಕ್ಷಾತ್ಕರಿಸಿಕೊಂಡ ಅನುಭಾವದ ಅನುಸಂಧಾನವನ್ನು ಸಾಧಕ ಜೀವಿಗಳ ಉದ್ಧಾರಕ್ಕಾಗಿ ಅನುವರಿತು ವಿನಿಯೋಗಿಸುವುದೇ ಆತನ ಲೀಲೆಯಾಗುತ್ತದೆ. ಆತನು ನಡೆದುದೇ ಮಾರ್ಗ ನುಡಿದುದೇ ಮಂತ್ರವಾಗುತ್ತದೆ. ಮುಟ್ಟಿದುದನ್ನೆಲ್ಲಾ ಚಿನ್ನವನ್ನಾಗಿ ಮಾಡುವ ಚಿದ್ಘನ ಚಿಂತಾಮಣಿಯಂತೆ ಆತ ಸಂಚಾರವನ್ನು ಕೈಕೊಳ್ಳುತ್ತಾನೆ. ಸಮುದ್ರವೇ ನಡೆಯತೊಡಗಿದಂತೆ ಆಗುತ್ತದೆ. ಆ ಮಹಾಪೂರದಲ್ಲಿ ಕೆರೆ, ಹಳ್ಳಕೊಳ್ಳ, ಸರೋವರಗಳು ತಮ್ಮ ಅರಕೆಯನ್ನು ತುಂಬಿಕೊಳ್ಳುತ್ತವೆ; ಪೂರ್ಣತೆಯನ್ನು ಪಡೆಯುತ್ತವೆ.

ಸಾಧಕರ ಆಯಾ ಮನೋಧರ್ಮದ ಮಟ್ಟದಲ್ಲಿ ನಿಂತು, ಅಲ್ಲಿಂದ ಮುಂದೆ ಅವರನ್ನು ಕೊಂಡೊಯ್ಯುವ ರೀತಿ ಅದ್ವಿತೀಯವಾದುದು. ಅಣ್ಣನನ್ನು ಕಳೆದುಕೊಂಡು ಗೋಳಾಡುತ್ತಿರುವ ಮುಕ್ತಾಯಕ್ಕನನ್ನು ಎಚ್ಚರಿಸುವ ರೀತಿ ಒಂದಾದರೆ, ಕೇವಲ ಒಕ್ಕಲಿಗನಾಗಿದ್ದ ಗೊಗ್ಗಯ್ಯನನ್ನು ಎಚ್ಚರಿಸಿದುದು, ಇನ್ನೂ ಯೋಗದ ಕೊನೆಯ ಹಂತದಲ್ಲಿ ನಿಂತು *"ಸಾಕಾರ ನಿಷ್ಠೆ ಭೂತಂಗಳೊಳಗನುಕಂಪೆ"*ಯ ನೋಂಪಿಯಲ್ಲಿ ತೊಡಗಿದ್ದ ಸಿದ್ಧರಾಮನನ್ನು ಶಿವಯೋಗಿಯನ್ನಾಗಿ

ಮಾಡುವ ರೀತಿಯೇ ಇನ್ನೊಂದು. ಹಾಗೆಯೇ ಹಠಯೋಗದ ಸಿದ್ಧಿಗಳೇ ಸರ್ವವೆಂಬ ಭ್ರಮೆಗೆ ಒಳಗಾಗಿ ಅಹಂಕಾರದಿಂದ ಮೆರೆಯುತ್ತಿದ್ದ ಗೋರಕ್ಷನಿಗೆ ತಿಳಿಯಹೇಳಿದ ಬಗೆಯಂತೂ ಅಲ್ಲಮನ ವ್ಯೋಹಕಾಯ ಸಿದ್ಧಿಗೆ ಉಜ್ವಲ ಸಾಕ್ಷಿಯಾಗಿದೆ. *"ಗೋರಖ ಪಂಥ"* ಎಂದು ಪ್ರಸಿದ್ಧವಾಗಿರುವ ಒಂದು ಶಾಖೆಗೆ ಮೂಲಪುರುಷನಾದ ಗೋರಕ್ಷ ಈತನೇ? ಪ್ರಭುದೇವನ ಪ್ರಭಾವ ಆತನ ಮೇಲೆ ಎಷ್ಟರ ಮಟ್ಟಿಗೆ ಆಯಿತು? ಎಂಬ ಮೊದಲಾದ ಅಂಶಗಳು ಸಂಶೋಧನೆಗೆ ಕುತೂಹಲಕರ ವಾದವುಗಳು. ಅದು ಹೇಗಾದರು ಇರಲಿ, ಅಂತೂ ಇಂತಹ ಸನ್ನಿವೇಶಗಳು ಅಲ್ಲಮಪ್ರಭುವಿನ ವ್ಯಕ್ತಿತ್ವಕ್ಕೆ ಕನ್ನಡಿಯಂತಿವೆ. ಅವುಗಳನ್ನು ಶೂನ್ಯಸಂಪಾದನೆ ಬಹಳ ಚೆನ್ನಾಗಿ ಚಿತ್ರಿಸಿದೆ. ಅವುಗಳ ವರ್ಣನೆ ಇಲ್ಲಿ ಅಪ್ರಕೃತ.

ಇವೆಲ್ಲಕ್ಕಿಂತ ಹೆಚ್ಚಾಗಿ ಆ ಯುಗದ ಇನ್ನೊಂದು ಮಹಾಶಕ್ತಿಯ ಹಾರೈಕೆ ಪ್ರಭು ದೇವನನ್ನು ಆಕರ್ಷಿಸಿತು. ಅಲ್ಲಮಪ್ರಭು ಸಿದ್ಧಿಯನ್ನು ಪಡೆದು ಸಂಚಾರವನ್ನು ಕೈಕೊಳ್ಳುವ ವೇಳೆಗೆ ಬಸವಣ್ಣನವರು ಕಲ್ಯಾಣದಲ್ಲಿ ತಮ್ಮ ಕಾರ್ಯವನ್ನು ಮುಂದುವರಿಸಿದ್ದರು. ಬಿಜ್ಜಳನ ಬಳಿಯಲ್ಲಿ ಸಾಮಾನ್ಯ ಕರಣಿಕರಾಗಿ ಪ್ರಾರಂಭವಾದ ಅವರ ಕಾರ್ಯ, ಅವರ ವ್ಯಕ್ತಿತ್ವದ ಪ್ರಭಾವದಿಂದ ವ್ಯಾಪಕವಾಗಿ ಬೆಳೆಯತೊಡಗಿತ್ತು. ರಾಜಕೀಯದಲ್ಲಿ ಕ್ರಮೇಣ ಉನ್ನತ ಸ್ಥಾನವನ್ನು ಪಡೆಯುತ್ತಾ ಹೋದಂತೆ, ಅವರ ಭಕ್ತಿಸಾಧನೆಯೂ ಶ್ರೀಮಂತವಾಗುತ್ತಾ ನಡೆದಿತ್ತು. ಬಿಜ್ಜಳನ ರಾಜ್ಯದಲ್ಲಿ ಮಂತ್ರಿಯಾಗುವ ವೇಳೆಗೆ, ಅಂತರಂಗದ ಸಾಮ್ರಾಜ್ಯದಲ್ಲಿ ಭಕ್ತಿಭಂಡಾರಿಯಾಗಿದ್ದರು.

ತಮ್ಮ ಈ ಲೌಕಿಕ ಅಧಿಕಾರ ಮತ್ತು ಆಧ್ಯಾತ್ಮಿಕ ಸಾಧನೆ ಗಳೆರಡನ್ನು ಸಾಮಾಜಿಕ ವಿಷಮತೆಯ ನಿರ್ಮೂಲನಕ್ಕಾಗಿ ವಿನಿಯೋಗಿಸಲು ಬಸವಣ್ಣನವರು ಸಂಕಲ್ಪಿಸಿದರು. ಧರ್ಮದ ನಿಜಸ್ವರೂಪವನ್ನರಿಯಲು ಅವಕಾಶವಿಲ್ಲದೆ ಬಾಯಾರಿ ಬಳಲುತ್ತಿರುವ ದೀನ ದುಃಖಿಗಳಾಗಿ ಅವರ ಹೃದಯವು ಮಿಡಿಯಿತು. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆ ಮತ್ತು ಅನ್ಯಾಯಗಳನ್ನು ಕಂಡು ಅವರ ಮನಸ್ಸು ಕುದಿಯಿತು. ತಾವು ಉತ್ತಮ ವರ್ಣದವರಾಗಿದ್ದರೂ ಅದನ್ನು ತ್ಯಜಿಸಿ ಎಲ್ಲರನ್ನೂ ಸಮಾನವೆಂದು ಸಾರುವ ಮಾನವ ಧರ್ಮವನ್ನು ಜೀವಂತ ಗೊಳಿಸಿ ಮಾನವತೆಯನ್ನು ಉದ್ಧರಿಸಲು ಹೆಣಗುತ್ತಿದ್ದರು. ಅವರ ಕಾರ್ಯಕ್ಷೇತ್ರ ದಿನದಿನಕ್ಕೆ ವ್ಯಾಪಕವಾಗಿ ಬೆಳೆದು ದೇಶದ ನಾನಾ ಭಾಗಗಳಿಂದ ಅನೇಕ ಸಾಧಕರನ್ನು ಅದು ಆಕರ್ಷಿಸಿತು. ಅವರ ಕಾರ್ಯಕ್ಷೇತ್ರ ವಿಸ್ತಾರವಾದಂತೆಲ್ಲ ಸಮಸ್ಯೆಗಳೂ ಹೆಚ್ಚಿದುವು. ಆ ವೇಳೆಗೆ ಅಲ್ಲಮಪ್ರಭುವಿನಂತಹ ಜ್ಞಾನವೈರಾಗ್ಯಗಳ ತೇಜೋಮೂರ್ತಿಯೊಂದರ ಆವಶ್ಯಕತೆಯಿತ್ತು. ಬಸವಣ್ಣನವರ ಹೃದಯ ಅಂತಹ ಮಹಾಶಕ್ತಿಗಾಗಿ ಹಾರೈಸುತ್ತಿತ್ತು. ಆ ಕರೆಯನ್ನು ಕೇಳಿಯೋ ಎಂಬಂತೆ ಅಲ್ಲಮಪ್ರಭುವು ಸಿದ್ಧರಾಮ ಮಹಾಯೋಗಿಯನ್ನು ಕರೆದುಕೊಂಡು ಕಲ್ಯಾಣಕ್ಕೆ ಬರುತ್ತಾನೆ. ಬಸವಣ್ಣನವರ ವ್ಯಕ್ತಿತ್ವವನ್ನು ಕಂಡು ಅವನ ಮನಸ್ಸು ಮಾರುಹೋಗುತ್ತದೆ. ಎಲ್ಲಿಯೂ ನೆಲೆಯಾಗಿ ನಿಲ್ಲದೆ ಜಗದ್ಭರಿತ ಜಂಗಮನಾಗಿ ಸಂಚಾರವನ್ನು ಕೈಕೊಂಡಿದ್ದ ಅಲ್ಲಮನು ಕಲ್ಯಾಣದಲ್ಲಿ ಕೆಲವು ಕಾಲ ನೆಲೆಸಿದುದು ಒಂದು ಅಪೂರ್ವ ಘಟನೆಯೇ ಸರಿ. ಕಲ್ಯಾಣದಲ್ಲಿ ಪ್ರಭು ನಿರ್ವಹಿಸಿದ ಪಾತ್ರವನ್ನೂ, ಅಲ್ಲಿ ಕಂಡುಬರುವ ಅವನ ವ್ಯಕ್ತಿತ್ವವನ್ನು ಮುಂದೆ ನೋಡಲಿರುವುದರಿಂದ ಇಲ್ಲಿ ಮುಂದಿನ ಅವನ ಜೀವನ ಚಿತ್ರದ ಕಡೆಗೆ ಕಣ್ಣು ಹಾಯಿಸಬಹುದು.

ಕಲ್ಯಾಣದಲ್ಲಿ ತನ್ನ ಕರ್ತವ್ಯ ಮುಗಿಯುತ್ತಾ ಬಂದುದನ್ನು ತಿಳಿದು ಅಲ್ಲಮಪ್ರಭು ಬಸವಣ್ಣನವರಿಗೂ ಮುಂದಿನ ಕರ್ತವ್ಯವನ್ನು ಎಚ್ಚರಿಸಿ ಶ್ರೀಶೈಲದತ್ತ ಹೊರಟನು. ಶ್ರೀಶೈಲದ ಮಲ್ಲಿಕಾರ್ಜುನನ್ನೂ ದಾಟಿ, ಆ ಪರ್ವತಗಳ ಸಾಲಿನಲ್ಲಿರುವ ಕದಳಿಯ ವನಕ್ಕೆ ಆತನ ಪ್ರಯಾಣ ನಡೆಯಿತು. ಹಿಂದೊಮ್ಮೆ ಸಂಚಾರವನ್ನು ಕೈಕೊಂಡು ಬಂದಾಗ ಕದಳಿಗೆ ಆತ ಹೋಗಿ ಅಲ್ಲಿ ಕೆಲವು ದಿನಗಳು ಇದ್ದಿರಬೇಕೆಂದು ತೋರುತ್ತದೆ. ಅಕ್ಕಮಹಾದೇವಿ ಕಲ್ಯಾಣದಿಂದ ಹೊರಡುವಾಗ ಆತ ಹೇಳಿಕಳುಹಿಸಿದ ಮಾತುಗಳನ್ನು ನೋಡಿದರೆ ಈ ಅಂಶ ಮನದಟ್ಟಾಗುತ್ತದೆ.

*ನೀನುನಾನೆಂಬುಭಯಸಂಗವಳಿದು, ತಾನು ತಾನಾದ*
*ತ್ರಿಕೂಟವೆಂಬ ಮಹಾಗಿರಿಯ ಮೆಟ್ಟಿ ತುಟ್ಟತುದಿಯಲಿ ನೋಡಲು,*
*ಬಟ್ಟಬಯಲು ಕಾಣಬಹುದು ನೋಡಾ;*
*ಆ ಬಯಲ ಬೆರಸುವವರೆ ತ್ರಿಕೂಟ ಗಿರಿಯೊಳಗೊಂದು*
*ಕಾಣಬಾರದ ಕದಳಿಯುಂಟು ನೋಡಾ*
*ಕದಳಿಯ ಕಳದಲ್ಲಿ ಒಳಹೊಕ್ಕು ನೋಡಲು*
*ತೊಳಗಿ ಬೆಳಗುವ ಜ್ಯೋತಿಯುಂಟು ಕೇಳಾ*
*ನಡೆಯಲ್ಲಿಗೆ ತಾಯೇ ಗುಹೇಶ್ವರ ಲಿಂಗದಲ್ಲಿ*
*ಪರಮ ಪದವಿ ನಿನಗೆ ಸ್ವಯವಹುದು ನೋಡಾ (೧೫೬೨)*

ಎಂದು ಹೇಳಿ ಅಲ್ಲಿಗೆ ಅವಳನ್ನು ನಿರ್ದೇಶಿಸಿದ್ದನು. ಈ ವಚನದಲ್ಲಿರುವ "ತ್ರಿಕೂಟಗಿರಿ", "ಬಟ್ಟಬಯಲು", "ಗುಪ್ತಕದಳಿ" ಈ ಮಾತುಗಳು ಕದಳಿಯ ವನವಿರುವ ಭೌಗೋಳಿಕ ಸನ್ನಿವೇಶವನ್ನು ಬಹಳ ಸುಂದರವಾಗಿ ಮಾಡಿ ಕೊಡುತ್ತಿವೆ. ಅಲ್ಲದೆ ಈ ಸ್ಥಳಗಳು ಅಲ್ಲಮನಿಗೆ ಪೂರ್ವಪರಿಚಿತ ವೆಂಬುದನ್ನು ಮನದಟ್ಟು ಮಾಡಿಕೊಡುತ್ತಿವೆ.

ಹೀಗೆ ಅಂದು ಮಹಾದೇವಿಯಕ್ಕನನ್ನು ಕದಳಿಗೆ ಕಳುಹಿಸಿದ ಅಲ್ಲಮಪ್ರಭು ತನ್ನ ಜೀವನದ ಕೊನೆಯಲ್ಲಿ ತಾನೂ ಅಲ್ಲಿಗೆ ಬರುತ್ತಾನೆ. ನಿರ್ಜನವಾದ ಹಾಗೂ ಪ್ರಶಾಂತವಾದ ಅಲ್ಲಿನ ವಾತಾವರಣಕ್ಕೆ ಬಹುಶಃ ಹಿಂದೆಯೇ ಆತನು ಮನಸೋತಿದ್ದನೆಂದು ತೋರುತ್ತದೆ. ಆದುದರಿಂದ ತನ್ನ ಸಮರಸದ ಕೊನೆಯ ನಿಲುವಿನಲ್ಲಿ ಲೀನವಾಗಲು ಆ ಸ್ಥಳವನ್ನು ಆರಿಸಿಕೊಳ್ಳುತ್ತಾನೆ. ಅಲ್ಲಿ ಅಲ್ಲಮನು ಆತ್ಮಚೈತನ್ಯದ ಪ್ರಭೆ, ಗುಹೇಶ್ವರನ ಹೃದಯ ಗಹ್ವರದಲ್ಲಿ ಒಡೆವರೆದು ಒಂದಾಗುತ್ತದೆ. ಬಳ್ಳಿಗಾವೆಯ ಪ್ರಭು, ಜಗತ್ತಿನ ವಿಭುವಾಗಿ ಪರಿಣಮಿಸುತ್ತಾನೆ. ಇದು ಅವನ ವಚನಗಳಿಂದ ಮತ್ತು ಇತರ ಆಧಾರಗಳಿಂದ ನಮಗೆ ಕಂಡು ಬರುವ ಆತನ ಜೀವನದ ಚಿತ್ರ. ಅನೇಕ ಕಡೆಗಳಲ್ಲಿ ಅದು ಅಸ್ಪಷ್ಟ, ಆದರೆ ಆತನ ಅಂತರಂಗ ಜೀವನದಲ್ಲಿ ಕಂಡುಬರುವ ಅನುಭಾವದ ಚಿತ್ರ, ಆತನ ವಚನಗಳಲ್ಲಿ ಅತ್ಯುಜ್ವಲವಾಗಿ ಮೂಡಿ ನಿಂತಿದೆ. ಅದನ್ನು ಇನ್ನು ನಾವು ನೋಡಬಹುದು.

## ೨. ಅಲ್ಲಮನ ಅನುಭಾವ ಮಾರ್ಗ

ಅಲ್ಲಮಪ್ರಭುವಿನ ಮಾರ್ಗ ಜ್ಞಾನ ಪ್ರಧಾನವಾದ ಮಾರ್ಗ. ತೀವ್ರ ವೈರಾಗ್ಯವನ್ನು ಕೈಕೊಂಡು, ತನ್ನ ಸಾಧನೆಯ ಮಾರ್ಗದಲ್ಲಿ ಅಡ್ಡವಾದ ಮಾಯೆಯ ಪಾಶವನ್ನು ಕತ್ತರಿಸಿ ಮುಂದೆ ನಡೆದವನು. ಅವನ ಮಹಾಚೇತನದ ಜಾಜ್ವಲ್ಯ ಮಾನವಾದ ವಿಕಾಸವನ್ನು ಮಾಯೆಯ ಕಟ್ಟು ಬಂಧಿಸಲಾರದೇ ಹೋಯಿತು :

*ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ,*
*ಅವು ಜಗಕ್ಕಿದ ವಿಧಿ,*
*ನಿನ್ನೊಡವೆಯೆಂಬುದು ಗುರುಲಿಂಗಜಂಗಮಕ್ಕೆ*
*ಅಂತಪ್ಪ ದಾಸೋಹ ಮಾಡುವ ಜ್ಞಾನರತ್ನ ದಿವ್ಯರತ್ನವ ಕೆಡಗುಡದೆ*
*ಆ ರತ್ನವ ನೀನಲಂಕರಿಸಿದೆಯಾದಡೆ*
*ನಮ್ಮ ಗುಹೇಶ್ವರಲಿಂಗದಲ್ಲಿ ನಿನ್ನಿಂದ ಬಿಟ್ಟು*
*ಸಿರಿವಂತರಿಲ್ಲ ಕಾಣ ಎಲೆ ಮನವೇ (೭೮೯)*

ಎಂದು ತನ್ನ ಮನಸ್ಸಿಗೆ ತಾನು ಹೇಳಿಕೊಂಡು ಆ ಜ್ಞಾನರತ್ನವನ್ನು ಹುಡುಕಿಕೊಂಡು ಹೊರಟವನು ಆತ.

ಅನೇಕ ಕಡೆಗಳಲ್ಲಿ ತಿರುಗಿ, ಅನೇಕ ಮಾರ್ಗಗಳಲ್ಲಿ ನಡೆದು ನೋಡಿದರೂ ಕೊನೆಯಲ್ಲಿ ಆತನ ಸಾಧನೆ ತತ್ವದರ್ಶನದ ಹಿನ್ನೆಲೆಯಲ್ಲಿಯೇ ವಿಕಾಸಗೊಂಡಿತು. ಶರಣರ ಸಾಧನೆಗೆ ಹಿನ್ನೆಲೆಯಾಗಿದ್ದ ಮೂಲಭೂತವಾದ ತತ್ವವೆಂದರೆ ವೀರಶೈವ ಧರ್ಮದ *"ಷಟ್‌ಸ್ಥಲ ಸಿದ್ಧಾಂತ"*. ಜೀವವು ದೇವನತ್ತ ತನ್ನ ಯಾತ್ರೆಯ ಮಾರ್ಗದಲ್ಲಿ ಏರಬೇಕಾದ ಆರು ಮೆಟ್ಟಿಲುಗಳೆನ್ನ ಬಹುದು ಈ ಷಟ್‌ಸ್ಥಲಗಳು. ತನ್ನ ನಿಜಸ್ವರೂಪವನ್ನು ಮರೆತು *"ತಾನು ದುಃಖಿ"* ಎಂದು ತಲ್ಲಣಗೊಳ್ಳುವ ಭಕ್ತನ ಮನಸ್ಸಿನ ತಳಮಳದಿಂದ ಹಿಡಿದು, ವಿಶ್ವವನ್ನೆಲ್ಲಾ ವ್ಯಾಪಿಸಿರುವ ಚೈತನ್ಯರೂಪ ಶಕ್ತಿಯೇ ತಾನೆಂಬ ಮುಕ್ತಿಯ ಶಾಂತಭಾವದ ವರೆಗಿನ ಎಲ್ಲ ಮನೋಧರ್ಮಗಳನ್ನೂ ಈ ಷಟ್‌ಸ್ಥಲಗಳಲ್ಲಿ ಕಾಣುತ್ತೇವೆ. ಈ ಷಟ್‌ಸ್ಥಲ ಮಾರ್ಗದಲ್ಲಿ ಭಕ್ತಿ, ಕರ್ಮ, ಜ್ಞಾನ- ಇವೆಲ್ಲಕ್ಕೂ ಪ್ರಾಮುಖ್ಯತೆ ಇದೆ. ಇವೆಲ್ಲವುಗಳ ಸಮನ್ವಯವೇ ಈ ಮಾರ್ಗದ ವೈಶಿಷ್ಟ್ಯ.

ಅಲ್ಲಮಪ್ರಭುವಿನ ಈ ಒಂದು ವಚನ, ಷಟ್‌ಸ್ಥಲಗಳ ಸಾರವನ್ನೆಲ್ಲಾ ಸಂಗ್ರಹವಾಗಿ ಹೇಳುತ್ತದೆ :

*ವಿಶ್ವಾಸಂದಿಂದ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರರಾಗಿ*
*ಆ ನಿಷ್ಠೆಯೊಳಗಣ ಸಾವಧಾನದಿಂದ ಪ್ರಸಾದಿಯಾಗಿ*
*ಆ ಸಾವಧಾನದೊಳಗಣ ಸ್ವಾನುಭವದಿಂ ಪ್ರಾಣಲಿಂಗಿಯಾಗಿ*
*ಆ ಸ್ವಾನುಭವದೊಳಗಣ ಅರಿವಿನಿಂ ಶರಣನಾಗಿ*
*ಆ ಅರಿವು ನಿಜದಲ್ಲಿ ಸಮರಸ ಭಾವವನ್ನೆದಿದ ನಿರ್ಭಾವ ಪದದೊಳು ನಿಂದ ಭೇದವೇ ಐಕ್ಯಸ್ಥಲ ಕಾಣಾ ಗುಹೇಶ್ವರಾ*

ಇಲ್ಲಿ *"ವಿಶ್ವಾಸದಿಂದ ಭಕ್ತನಾಗಿ"* ಎಂಬ ಮಾತು ಭಕ್ತಸ್ಥಲದ ಮೊಟ್ಟಮೊದಲನೆಯ ಮುಖ್ಯಲಕ್ಷಣಗಳನ್ನು ಸೂಚಿಸುತ್ತದೆ. ಆ ಪರಾತ್ಪರ ಸತ್ಯದ ವಿಷಯವಾದ ಶ್ರದ್ಧೆ, ವಿಶ್ವಾಸ ಇವು ಭಕ್ತಿಯ ತಳಹದಿ. ಜೀವನದಲ್ಲಿ ತೋರುವ ಅಸಮತೆಯನ್ನು ಕಂಡು, ಭಕ್ತ ತಳಮಳಗೊಂಡು ಇವೆಲ್ಲಕ್ಕೂ ಕಾರಣವಾಗಿರಬಹುದಾದ, ಸರ್ವಶಕ್ತವಾದ ಶಕ್ತಿಯನ್ನು ಶ್ರದ್ಧೆಯಿಂದ ಮೊರೆಹೋಗುತ್ತಾನೆ. ಸತ್ಯಶುದ್ಧವಾದ ಕಾಯಕದಲ್ಲಿ ನಿರತನಾಗಿ ಪ್ರೇಮ, ಸಹನೆ, ಕ್ಷಮೆ, ಕರುಣೆ, ನಿರಹಂಕಾರ ಇತ್ಯಾದಿ ಸದ್ಗುಣಗಳಿಂದ, ಸದಾಚಾರ ಗಳಿಂದ ಆ ಸ್ವರೂಪವನ್ನು ಹೆಚ್ಚು ಹೆಚ್ಚು ಹತ್ತಿರದಿಂದ ಅರಿಯಲು ಪ್ರಯತ್ನಿಸುತ್ತಾನೆ.

ಭಕ್ತನ ಈ ಸಾಧನೆ ಮಹೇಶ್ವರಸ್ಥಲದಲ್ಲಿ ಇನ್ನೂ ಹೆಚ್ಚು ಉಜ್ವಲವಾಗಿ ಮುಂದುವರಿಯುತ್ತದೆ. ಭಕ್ತನಿಗೆ ತಾನು ಹಿಡಿದ ಆದರ್ಶದಲ್ಲಿ ಅಚಲ ಶ್ರದ್ಧೆ, ಏಕೈಕ ನಿಷ್ಠೆ ಅತ್ಯಗತ್ಯ. ನೂರಾರು

ಕಡೆ ಹರಿದಾಡುವ ಮನಸ್ಸನ್ನು ಕೇಂದ್ರೀಕರಿಸಿ ಆ ಪರಾತ್ಪರ ಸತ್ವವೊಂದನ್ನೇ ಏಕೈಕ ನಿಷ್ಠೆಯಿಂದ ನಂಬಬೇಕು. ಮಹೇಶ್ವರ ಸ್ಥಲ ನಿಷ್ಠೆಯನ್ನು ಒತ್ತಿ ಹೇಳುತ್ತದೆ. *"ವಿಶ್ವಾಸದೊಳಗಣ ನಿಷ್ಠೆಯಿಂದ ಮಹೇಶ್ವರನಾಗಿ"* ಎಂಬ ಮಾತಿನಲ್ಲಿ ಅಲ್ಲಮಪ್ರಭು ಇದನ್ನು ವ್ಯಕ್ತಪಡಿಸಿದ್ದಾನೆ. ತನ್ನ ಸಾಧನೆಯ ಮಾರ್ಗದಲ್ಲಿ ಉರಿ ಬಂದರೂ, ಸಿರಿ ಬಂದರೂ ಅಂಜದೆ, ಅಳುಕದೆ, ಹಿಗ್ಗದೆ, ಕುಗ್ಗದೆ ಸಮಚಿತ್ತದಿಂದ ಮುನ್ನಡೆಯುವ ಛಲ, ಕೊನೆಗೆ ಮರಣವನ್ನೇ ಅಪ್ಪಬೇಕಾಗಿ ಬಂದರೂ *"ಮರಣವೇ ಮಹಾನವಮಿ"* ಎಂದು ಸಂತೋಷದಿಂದ ಅದನ್ನು ಎದುರುಗೊಳ್ಳಬಲ್ಲ ಸ್ಥಿತಪ್ರಜ್ಞೆ ಇಲ್ಲಿ ಕಂಡುಬರುತ್ತದೆ.

ಹೀಗೆ ಶ್ರದ್ಧೆಯಿಂದ ಭಕ್ತನಾಗಿ, ನಿಷ್ಠೆಯಿಂದ ಆ ಮಾರ್ಗದಲ್ಲಿ ಮುಂದುವರಿದ ಸಾಧಕನ ಮನಸ್ಸು ವಿಕಾಸವಾಗುತ್ತದೆ. ಆಧ್ಯಾತ್ಮಿಕ ಅನುಭವದ ಸಂಪತ್ತಿನಿಂದ ಆತನ ಹೃದಯ ಶ್ರೀಮಂತವಾಗುತ್ತದೆ ಭಕ್ತನ ಮನಸ್ಸಿನ ತಳಮಳ ಇಲ್ಲಿ ಕಂಡು ಬರುವುದಿಲ್ಲ. *'ಅಹಂ'* ಎಂಬುದು ಅಳಿದು *'ದಾಸೋಹಂ'* ಭಾವದಿಂದ ಕ್ರಿಯೆಗಳನ್ನು ಮಾಡುತ್ತಾ, ಆ ಕ್ರಿಯೆಯಲ್ಲಿ ಫಲದ ಆಶೆಯನ್ನು ಮಾಡದೆ ಎಲ್ಲವನ್ನೂ ಈಶ್ವರನ ಪ್ರಸಾದವೆಂಬ ಭಾವನೆಯಿಂದ ವರ್ತಿಸುವ ಶಾಂತ ಮನೋಭಾವ ಇಲ್ಲಿ ಕಂಡುಬರುತ್ತದೆ. ಇದೇ ಪ್ರಸಾದಿಸ್ಥಲ.

ಪ್ರಸಾದಿ ಸಾವಧಾನ ಭಕ್ತಿಯಿಂದ ಈಶ್ವರನ ಮೊರೆಹೋಗುತ್ತಾನೆ. ತಾನಿರುವಲ್ಲಿಯೇ, ತನ್ನ ಕಾಯಕದಿಂದಲೇ ಈಶ್ವರನ ದರ್ಶನವೆಂಬುದನ್ನು ಕಂಡುಕೊಳ್ಳುತ್ತಾನೆ. ಕಲುಷಿತ ಸ್ವಾರ್ಥದ ಸೋಂಕಿಲ್ಲದೆ ನಿರ್ಮಲವಾದ ಮನಸ್ಸಿನಿಂದ ಮಾಡುವ ಕರ್ಮಗಳು ಬಂಧಕವಾಗಲಾರವು. ಅಂತರ ಕರ್ಮವೇ ಕಾಯಕವೆನಿಸುಕೊಳ್ಳುತ್ತದೆ. ಪ್ರತಿಯೊಬ್ಬನೂ ತನ್ನ ತನ್ನ ಕಾಯಕದಲ್ಲಿ ನಿರತನಾಗಲೇಬೇಕು. ತಾನು ದುಡಿಯದೆ ಇನ್ನೊಬ್ಬರ ಹಂಗಿನಲ್ಲಿ ಬಾಳುವ ಅಧಿಕಾರ ಮನುಷ್ಯನಿಗಿಲ್ಲ. ಸಾಧಕನು ತನ್ನ ಕಾಯಕ ಯಾವುದೇ ಆಗಿರಲಿ, ಅದರಲ್ಲಿ ನಿರತನಾಗಿಯೇ ತನ್ನ ಸಾಧನೆಯನ್ನು ಮುಂದವರಿಸಬೇಕು. *"ಕಾರಿಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ, ದುರಾಸೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯಶುದ್ಧ ಕಾಯಕದ ನಿತ್ಯದ್ರವ್ಯ ಚಂದೇಶ್ವರ ಲಿಂಗಕ್ಕೆ ನೈವೇದ್ಯ ಕೇಳಯ್ಯ"* – ಎಂದು ಶರಣರ ಮಾತಿದೆ.

*'ಪ್ರಸಾದಿ'* ಎಂಬ ಮಾತನ್ನು ಅಲ್ಲಮಪ್ರಭು ಬಹಳ ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಿದ್ದಾನೆ. ದೇವರಿಗೆ ಅರ್ಪಿಸಿದುದು ಪ್ರಸಾದ; ಅದನ್ನು ಸ್ವೀಕರಿಸುವವನು ಪ್ರಸಾದಿ-ಎಂದು ಈ ಶಬ್ದದ ಅರ್ಥವಲ್ಲ; ಆತನು ಹೇಳುವಂತೆ :

*ಒಕ್ಕುದು ಪ್ರಸಾದವೆಂಬರು, ಮಿಕ್ಕುದು ಪ್ರಸಾದವೆಂಬರು;*
*ಒಕ್ಕುದು ಮಿಕ್ಕುದನೆಲ್ಲಾ ಬೆಕ್ಕು ಕೊಳ್ಳದೇ?*
*ಒಕ್ಕು ಮಿಕ್ಕು ಹೋಗುವ ಸಂಚ ಸಕೀಲವ ಬಲ್ಲರೆ*
*ಗುಹೇಶ್ವರ ಲಿಂಗದಲ್ಲಿ ಆತನೇ ಪರಮ ಪ್ರಸಾದಿ*

ದೇವರಿಗೋ ಗುರುಗಳಿಗೋ ಅರ್ಪಿಸಿದ್ದು ಪ್ರಸಾದವಾದರೆ ಅಂತಹ ಪ್ರಸಾದವನ್ನು ಒಂದು ಬೆಕ್ಕು ಕೂಡ ತಿನ್ನಬಹುದು. ಅದು ಪ್ರಸಾದಿಯೇ? 'ಪ್ರಸಾದಿ' ಎಂದರೆ *"ಒಕ್ಕು ಮಿಕ್ಕುಹೋಗುವ ಸಂಚ ಸಕೀಲವ ಬಲ್ಲವನು"* ಅಂದರೆ ತನ್ನನ್ನೇ ಪ್ರಸಾದವಾಗಿ ಅರ್ಪಿಸಿಕೊಂಡು ಅದನ್ನೂ ಮೀರಿ ಮೇಲೇರಿ ಹೋಗುವ ರಹಸ್ಯವನ್ನು ಅರಿತವನು – ಎನ್ನುತ್ತಾನೆ ಅಲ್ಲಮಪ್ರಭು. ಮತ್ತು ಈ ವಿಶ್ವವೆಲ್ಲಾ ಶಿವನ ಪ್ರಸಾದವೆಂದು ಕಾಣಬಲ್ಲವನು ಆತ. ಇಂತಹ ಒಂದು ದೊಡ್ಡ ಜೀವನದ ದಿವ್ಯ ಆದರ್ಶವನ್ನು ಪ್ರಸಾದಿಯ ಬಾಳಿನಲ್ಲಿ ಕಾಣುತ್ತೇವೆ.

ಈ ಮೂರು ಸ್ಥಲಗಳನ್ನು ಕಳೆಯುವ ವೇಳೆಗಾಗಲೇ ಸಾಧಕನ ಜೀವನ ಒಂದು ಹದಕ್ಕೆ ಬಂದಿರುತ್ತದೆ. ಶ್ರದ್ಧೆಯಿಂದ ಭಕ್ತನಾಗಿ, ನಿಷ್ಠೆಯಿಂದ ಆ ಮಾರ್ಗದಲ್ಲಿ ಮುಂದುವರಿದು, ಸತ್ಯಶುದ್ಧಕಾಯಕದಲ್ಲಿ ನಿರತನಾಗಿ, ಈ ವಿಶ್ವವೆಲ್ಲಾ ಸೃಷ್ಟಿಕರ್ತನ ಪ್ರಸಾದವೆಂಬ ಭಾವನೆಯಿಂದ ನಿರ್ಲಿಪ್ತ ಸ್ಥಿತಿಗೇರಿದ ಸಾಧಕನ ಮುಂದಿನ ಜೀವನ ಹೆಚ್ಚು ಅಂತರ್ಮುಖವಾಗುತ್ತದೆ. ತನ್ನ ಅಂತರಂಗದಲ್ಲಿಯೇ ಸೃಷ್ಟಿಕರ್ತನ ಶಕ್ತಿಯೆಲ್ಲಾ ಅಡಗಿರುವುದನ್ನು ಸ್ವಾನುಭವದಿಂದ ಕಂಡುಕೊಳ್ಳುತ್ತಾನೆ. ಅದನ್ನು ಅನುಭವವೇದ್ಯವನ್ನಾಗಿಸಿಕೊಳ್ಳಲು ಪ್ರಾಣಲಿಂಗ ಪೂಜೆಯನ್ನು ಕೈಕೊಳ್ಳುತ್ತಾನೆ. ಇದೇ ಪ್ರಾಣಲಿಂಗಿ ಸ್ಥಲ. ಇದನ್ನೇ *"ಸಾವಧಾನದೊಳಗಣ ಸ್ವಾನುಭಾವದಿಂದ ಪ್ರಾಣಲಿಂಗಿಯಾಗಿ"* ಎನ್ನುತ್ತಾನೆ ಅಲ್ಲಮಪ್ರಭು.

ಇಲ್ಲಿ ಭಕ್ತ ಬಹಿರ್ಮುಖವಾಗಿದ್ದಾಗ ಇಷ್ಟಲಿಂಗದ ಅನುಸಂಧಾನವನ್ನು ಮಾಡಿದಂತೆ, ಅಂತರ್‌ಮುಖನಾಗಿ ಅನುಭಾವ ಭಕ್ತಿಯಿಂದ ಪ್ರಾಣಲಿಂಗದ ಅನುಸಂಧಾನ ಮಾಡುತ್ತಾನೆ. ಅಂದರೆ ತನ್ನ ಕರದಲ್ಲಿರುವ ವಿಶ್ವದ ಪ್ರತೀಕವಾದ ಇಷ್ಟಲಿಂಗದ ಸ್ವರೂಪ ಶಕ್ತಿಯನ್ನು ತನ್ನ ಅಂತರಂಗದಲ್ಲಿಯೂ ಕಂಡುಕೊಳ್ಳುತ್ತಾನೆ. ತನ್ನ ಪ್ರಾಣಶಕ್ತಿಯನ್ನು ಲಿಂಗದಲ್ಲಿಯೂ, ಆ ಲಿಂಗಶಕ್ತಿಯನ್ನು ತನ್ನ ಪ್ರಾಣದಲ್ಲಿಯೂ ನಿಲ್ಲಿಸಿ ಆ ಎರಡರ ಅಭೇದವನ್ನು ಅನುಸಂಧಾನ ಮಾಡುತ್ತಾನೆ. ಇದೇ ಪ್ರಾಣಲಿಂಗ ಪೂಜೆಯಾಗುತ್ತದೆ. ಹಿಂದಿನ ಮೂರು ಸ್ಥಲಗಳಲ್ಲಿದ್ದ ದ್ವೈತ ದೃಷ್ಟಿ ಇಲ್ಲಿ ಅದ್ವೈತದ ಕಡೆಗೆ ತಿರುಗಿರುವುದನ್ನು ಕಾಣುತ್ತೇವೆ.





*ಹರಿವ ನದಿಗೆ ಮೈಯೆಲ್ಲಾ ಕಾಲು*
*ಉರಿವ ಅಗ್ನಿಗೆ ಮೈಯೆಲ್ಲಾ ನಾಲಿಗೆ*
*ಬೀಸುವ ಗಾಳಿಗೆ ಮೈಯೆಲ್ಲಾ ಕೈ*
*ಗುಹೇಶ್ವರಾ ನಿಮ್ಮ ಶರಣಂಗೆ ಸರ್ವಾಂಗಲಿಂಗ (೭೭೫)*

ಎಂದು ಹೇಳುವಲ್ಲಿ ಅಲ್ಲಮಪ್ರಭು ಪ್ರಾಣಲಿಂಗಿಯ ಸ್ವರೂಪವನ್ನೇ ವರ್ಣಿಸಿದ್ದಾನೆ.

ಪ್ರಾಣಲಿಂಗಿ ಸ್ಥಲದಲ್ಲಿ ಸಾಧಕನು ಊರ್ಧ್ವಮುಖವಾಗಿ ಅದ್ವೈತದ ಕಡೆಗೆ ದೃಷ್ಟಿಯನ್ನು ಬೀರುವುದನ್ನು ಕಂಡರೆ, ಶರಣ ಸ್ಥಲದಲ್ಲಿ ಆ ಅದ್ವೈತದ ಅನುಭಾವವನ್ನು ಕಾಣುತ್ತೇವೆ. *"ಸ್ವಾನುಭಾವದೊಳಗಣ ಅರಿವಿನಿಂ ಶರಣನಾಗಿ"* ಎಂದು ಅಲ್ಲಮಪ್ರಭು ಇದನ್ನು ಸೂಚಿಸಿದ್ದಾನೆ. ಇದುವರೆಗೂ ಬುದ್ಧಿಗೋಚರವಾದ ಸತ್ವದ ಸ್ವರೂಪ ಇಲ್ಲಿ ಅನುಭವ ಗೋಚರವಾಗುತ್ತದೆ. ಈ ಸೃಷ್ಟಿವಿನ್ಯಾಸಕ್ಕೆ ಕಾರಣನಾದ ಲೀಲಾಸ್ವರೂಪಿ ಶಿವನ ಒಂದು ಚಿದಂಶವೇ ತಾನೆಂಬುದು ಶರಣನಿಗೆ ಅಪ್ರಯತ್ನಪೂರ್ವಕವಾದ ಸಹಜಸ್ಥಿತಿಯಾಗಿ ಪರಿಣಮಿಸುತ್ತದೆ. ಆ ಸಹಜ ಸ್ವರೂಪ ಜ್ಞಾನದಿಂದ ಅವನು ತನ್ನ ಕರ್ಮಬಂಧನಗಳಿಂದಲೂ ಮಲಪಾಶಗಳಿಂದಲೂ ಬಿಡುಗಡೆಯನ್ನು ಪಡೆದು *"ಇದ್ದು ಬದ್ಧನಲ್ಲ, ಸುಳಿದು ಸೂತಕಿಯಲ್ಲ"* – ಎಂಬ ಜೀವನ್ಮುಕ್ತಸ್ಥಿತಿಗೆ ಬರುತ್ತಾನೆ.

ಸಾಧಕನ ಕೊನೆಯ ಸ್ಥಿತಿ ಐಕ್ಯಸ್ಥಲ. ಆನಂದಭಕ್ತಿಯಿಂದ, ಲಿಂಗ ಸ್ವರೂಪವೇ ತಾನೆಂದು ಕಂಡುಕೊಂಡ ಶರಣ, ಇಲ್ಲಿ ಸಮರಸ ಭಕ್ತಿಯಿಂದ ಲಿಂಗದಲ್ಲಿ ಬೆರೆತು ತಾನೂ ಲಿಂಗಸ್ವರೂಪನಾಗಿ ಪರಿಣಮಿಸುತ್ತಾನೆ. ಇದು ಅನುಭಾವದ ಕೊನೆಯ ಹಂತ. ಇದೇ ಲಿಂಗಾಂಗ ಸಾಮರಸ್ಯ. *"ಘೃತ ಘೃತವ ಬೆರಸಿದಂತೆ, ತೈಲ ತೈಲವ ಬೆರಸಿದಂತೆ, ನೀರು ನೀರ ಬೆರಸಿದಂತೆ, ಜ್ಯೋತಿಯು ಜ್ಯೋತಿಯ ಬೆರಸಿದಂತೆ, ಬಯಲು ಬಯಲ ಬೆರಸಿದಂತೆ"* ಎಂದು ಮುಂತಾಗಿ ಶರಣರು ಈ ನಿಲವನ್ನು ವರ್ಣಿಸುತ್ತಾರೆ. ಅಂಬುದಿಯೊಳಗೆ ಬಿದ್ದ ಆಲಿಕಲ್ಲಿನಂತೆ, ಲಿಂಗ ಸಮುದ್ರದೊಳಗೆ ಮುಳುಗಿ ಭಿನ್ನಭಾವವನ್ನು ಅಳಿದು ತಾನೂ ಸಮುದ್ರವೇ ಆಗಿ ಪರಿಣಮಿಸುತ್ತಾನೆ ಶರಣ. ತನ್ನ ಜೀವನದಲ್ಲಿ ಏರಬಹುದಾದ ಆಧ್ಯಾತ್ಮದ ಕೊನೆಯ ಮಟ್ಟವನ್ನು ಈ ಐಕ್ಯಸ್ಥಲ ವರ್ಣಿಸುತ್ತದೆ. ಈ ಷಟ್‌ಸ್ಥಲ ಮಾರ್ಗದಲ್ಲಿ ನಡೆದು ಆ ಕೊನೆಯ ಮಟ್ಟವನ್ನು ಮೀರಿ ನಿಂತವನು ಅಲ್ಲಮಪ್ರಭು.

ಈ ಅನುಭಾವಮಾರ್ಗ ಪೂರ್ಣದೃಷ್ಟಿಯಿಂದ ಜೀವನವನ್ನು ನೋಡಿದ ಸಾಧಕರ ಸಾಧನೆಯ ಫಲ. *'ಅನುಭಾವ'* ಎನ್ನುವ ಮಾತಿಗೆ ಶರಣರು, ತಮ್ಮ ಜೀವನ ಮತ್ತು ಸಾಧನೆಗಳಿಂದ ಒಂದು ವಿಶಿಷ್ಟವಾದ ಅರ್ಥವನ್ನು ತಂದುಕೊಟ್ಟರು. *"ಅನುಭಾವವೆಂಬುದು ಅಂತರಂಗದ ರತ್ನ". "ಅನುಭಾವವೆಂಬುದು ಆತ್ಮವಿದ್ಯೆ", "ಅನುಭಾವವೆಂಬುದು ನಿಜ ನಿವಾಸದಲ್ಲಿರುಸುವುದು"* ಎಂದು ಮುಂತಾಗಿ ಶರಣರು ಹೇಳುವ ಮಾತುಗಳಿಂದ ಆ ಶಬ್ದ ಅರ್ಥಕಲ್ಪನೆಯನ್ನು ಮಾಡಿಕೊಳ್ಳಬಹುದು. ಆ ಮಾತಿನಲ್ಲಿ ಶರಣರು ತಮ್ಮ ಜೀವನದ ಅನುಭವ ಸಂಪತ್ತನ್ನು ತುಂಬಿ, ಮಾನವ ಜೀವಿತದ ಮಹೋದ್ದೇಶವನ್ನು ಒಳಗೊಳ್ಳಬಲ್ಲ ವ್ಯಾಪಕವಾದ ಅರ್ಥದಿಂದ ಅದನ್ನು ಶ್ರೀಮಂತಗೊಳಿಸಿದರು.

ಅಂತರಂಗದಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ, ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ವದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವುದು *'ಅನುಭಾವ'* ಎಂದು ಹೇಳಬಹುದು. ಇದು ಬುದ್ಧಿ ಮನಗಳಿಗೆ ನಿಲುಕದೆ ಅವುಗಳನ್ನು ದಾಟಿದ 'ಅಂತಸ್ಫುರಣ'ದಿಂದ ಅನುಭೂತವಾಗುತ್ತದೆ. ಪ್ರವಾಹರೂಪವಾದ ಈ ಪ್ರಪಂಚದ ಚಲನೆಯಲ್ಲಿ ಒಂದು ನಿಶ್ಚಲ ಸತ್ವವನ್ನು ಕಂಡು, ಕೊನೆಯಲ್ಲಿ ತಾನೇ ಅದು ಆಗಿ ಪರಿಣಮಿಸುವ ಮಹಾಪರಿವರ್ತನೆ ಅನುಭಾವ. *"ಉರಿಯ ಪರ್ವತವನ್ನು ಅರಗಿನ ಬಾಣದಲೆಚ್ಚಂತೆ" "ಕರ್ಪೂರದ ಗಿರಿಯನುರಿಹಿಡಿದ ಬಳಿಕ ಇದ್ದಿಲುಂಟೆ?"* – ಮುಂತಾದ ಮಾತುಗಳಲ್ಲಿ ಅಲ್ಲಮಪ್ರಭು ಈ ಅನುಭಾವದ ಸ್ವರೂಪವನ್ನು ಹೇಳಿದ್ದಾನೆ.

ಆದರೆ ಈ ಅನುಭಾವ ಕೇವಲ ಕೆಲವರಿಗೆ ಮಾತ್ರ ಮೀಸಲಾಗಿ, ಕನ್ನಡಿಯ ಗಂಟಿನಂತೆ ಆಗಬಾರದು. ವ್ಯಕ್ತಿಯು ಜೀವನದ ಯಾವುದೇ ರಂಗದಲ್ಲಿದ್ದರೂ ಆತನಿಗೆ ನಿಲುಕಬಹುದಾದ ಪ್ರಾಯೋಗಿಕ ಮಾರ್ಗವನ್ನು ಶರಣರು ರೂಪಿಸಿದರು. ವ್ಯಕ್ತಿ ಸಮಾಜದಲ್ಲಿ ಬಾಳಬೇಕಾದವನು ಮತ್ತು ತನ್ನ ಉದ್ಧಾರವನ್ನು ತಾನೇ ಕಂಡುಕೊಳ್ಳಬೇಕಾದವನು. ಆತ ಸಮಷ್ಟಿಜೀವಿ ಮತ್ತು ವ್ಯಷ್ಟಿಜೀವಿ ಎರಡೂ ಹೌದು. ಒಂದನ್ನು ಇನ್ನೊಂದು ತಿರಸ್ಕರಿಸಬಾರದೆಂಬುದು ಶರಣರ ದೃಷ್ಟಿ. ವ್ಯಷ್ಟಿ-ಸಮಷ್ಟಿಗಳಲ್ಲಿ ವ್ಯಕ್ತಿಯ ಎಲ್ಲ ಶಕ್ತಿಗಳಲ್ಲಿಯೂ ಒಂದು ಸಾಮರಸ್ಯವನ್ನು ತರಲು ಶರಣರ ಮಾರ್ಗ ಪ್ರಯತ್ನಿಸಿದೆ ಮತ್ತು ಅದನ್ನು ಸಾಧಿಸಿ ತೋರಿಸದೆ.

ವ್ಯಕ್ತಿಯಲ್ಲಿರುವ ಶಕ್ತಿಗಳನ್ನು ಆಧ್ಯಾತ್ಮಿಕ ಸಾಧನೆಯ ದೃಷ್ಟಿಯಿಂದ ಗುರುತಿಸಬಹುದಾದರೆ ಅಲ್ಲಿ ಪ್ರಧಾನವಾಗಿ ಕೆಲವು

ಬಗೆಗಳನ್ನು ಕಾಣುತ್ತೇವೆ. ಕೆಲವರಲ್ಲಿ ವಿಚಾರಶಕ್ತಿ, ತರ್ಕಶಕ್ತಿ ಪ್ರಧಾನವಾಗಿ ಕಂಡುಬಂದರೆ, ಇನ್ನು ಕೆಲವರಲ್ಲಿ ಭಾವುಕತೆ ಆಂತರ್ಯದ ಹಂಬಲದಿಂದ ಮಿಡಿಯುವ ಪ್ರೇಮದ ಆದೇಶಗಳು ಪ್ರಧಾನವಾಗಿ ಕಂಡುಬರುತ್ತವೆ. ಮತ್ತೆ ಕೆಲವರಲ್ಲಿ ಕ್ರಿಯಾಶಕ್ತಿ ಪ್ರಧಾನವಾಗಿ ಗೋಚರಿಸಬಹುದು. ಅಂತರಂಗದ ಈ ಶಕ್ತಿಗಳ ಭೇದದಿಂದಲೇ ಸಾಧನೆಯಲ್ಲಿ ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗ ಇವೇ ಮುಂತಾದ ಯೋಗಮಾರ್ಗಗಳು ರೂಪಿತವಾಗಿವೆ ಎನ್ನಬಹುದು.

ಶರಣರಲ್ಲಿಯೂ ಈ ಎಲ್ಲ ಮನೋಧರ್ಮದವರನ್ನೂ ಕಾಣುತ್ತೇವೆ. ಅವರ ಸಾಧನೆಯ ಮಾರ್ಗದಲ್ಲಿಯೂ ವೈವಿಧ್ಯ ವಿದೆ. ಆದರೆ ಈ ವೈವಿಧ್ಯಗಳಲ್ಲಿ ಒಂದು ಸಮನ್ವಯವನ್ನು ಸಾಧಿಸುವ ಶಕ್ತಿಯನ್ನು ಶರಣರ ಅನುಭಾವಮಾರ್ಗ ಪಡೆದಿದೆ. ಭಕ್ತಿಭಂಡಾರಿಯಾದ ಬಸವಣ್ಣನವರು ಮತ್ತು ಮಧುರ ಭಕ್ತಿಯ ನಿಧಿ ಅಕ್ಕಮಹಾದೇವಿ ಒಂದು ಕಡೆ ಇದ್ದರೆ, ಜ್ಞಾನಯೋಗಿ ಯಾಗಿ ಕಂಗೊಳಿಸುವ ಚೆನ್ನಬಸವಣ್ಣ ಇನ್ನೊಂದು ಕಡೆ ಇದ್ದಾನೆ. ವ್ಯಾಪಕವಾದ ಅರ್ಥದಲ್ಲಿ ಕರ್ಮಯೋಗವನ್ನು ಪ್ರತಿನಿಧಿಸಿ ಶಿವಯೋಗದ ಮಟ್ಟಕ್ಕೇರಿದವನು ಸಿದ್ಧರಾಮ. ಇತರ ನೂರಾರು ಶರಣರು ತಮ್ಮ ತಮ್ಮ ಕಾಯಕಕ್ಕನುಗುಣವಾಗಿ, ಮತ್ತು ತಮ್ಮ ತಮ್ಮ ಮನೋಧರ್ಮವನ್ನವಲಬಿಸಿ ತಮ್ಮ ತಮ್ಮ ಮಾರ್ಗಗಳನ್ನು ರೂಪಿಸಿಕೊಂಡರು. ಆದರೆ ಅಲ್ಲಮಪ್ರಭು ಇವರೆಲ್ಲರ ಮಧ್ಯದಲ್ಲಿ ಈ ಎಲ್ಲ ಶಕ್ತಿಗಳನ್ನೂ ಒಳಗೊಂಡು ಬೆಳಗುತ್ತಾ ಸೂರ್ಯಪ್ರಕಾಶದಂತೆ ಕಂಗೊಳಿಸುವ ಮಹಾಕಾಂತಿ ಪುಂಜವಾಗಿ ಪರಿಣಮಿಸಿದ್ದಾನೆ.

ಇವೆಲ್ಲವನ್ನೂ ಒಳಗೊಂಡರೂ ಇವೆಲ್ಲಕ್ಕೂ ಅತೀತವಾಗಿ ನಿಂತ ನಿಲುವು ಆತನದು.

*ನೆನಹು ಸತ್ತಿತ್ತು. ಭ್ರಾಂತು ಬೆಂದಿತ್ತು.*
*ಅರಿವು ಮರೆಯಿತ್ತು, ಕುರುಹುಗೆಟ್ಟಿತ್ತು*
*ಅಲ್ಲಿ ಗತಿಯನರಸಲುಂಟೇ? ಮರೆಯನರಸಲುಂಟೆ?*
*ಅಂಗವಾಗಿ ನಷ್ಟವಾಗಿ ಲಿಂಗದಲ್ಲಿ ಲೀಯವಾಗಿತ್ತು.*
*ಕಂಗಳಂಗದ ಕಳೆಯ ಬೆಳಕಿನ ಭಂಗ ಹಿಂಗಿತ್ತು ಗುಹೇಶ್ವರಾ''*
*(೨೯೮)*

ಎಂದು ಅನಿಮಿಷಯೋಗಿಯಿಂದ ತಾನು ಪಡೆದ ಪೂರ್ಣತೆಯ ನಿಲುವನ್ನು ಹೇಳಿಕೊಂಡಿದ್ದಾನೆ. ದ್ವಂದ್ವಾತೀತ ವಾದ ವಾಙ್ಮನಕ್ಕಗೋಚರವಾದ, ಶಬ್ದಗಂಭೀರವಾದ ಸಿದ್ಧಿ ಲಭಿಸಿತು. ಅವನು ಕೊಂಡುದೇ ಗಮನ, ನಿಂದುದೇ ನಿವಾಸವಾಯಿತು. ನಿಶ್ಚಿಂತೆಯೆಂಬ ಆಶ್ರಮದೊಳಗೆ, ನಿರಾಕುಳ ವೆಂಬ ಸಿಂಹಾಸನವನಿಟ್ಟು, ಮಹಾಘನ ಪ್ರಾಣ ಲಿಂಗವನ್ನು, ಜ್ಞಾನದ ಬೆಳಕಿನಲ್ಲಿ ಪೂಜಿಸುವ ವಿಶ್ವಪೂಜೆ ಅವನ ನಿತ್ಯ ಪೂಜೆಯಾಯಿತು. *''ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಲ್ಲದ ರುಚಿ, ಭಾವವೇ ಖರ್ಪರವಾಗಿ ಪರಮದೇಹಿ ಎಂದು ಬೇಡುವ ಪರಮನಾಗಿ''* ಪರಿಣಮಿಸಿದ ಅಲ್ಲಮಪ್ರಭು. ಇನ್ನು ಮುಂದಿನ ಆತನ ಸಂಚಾರವೆಲ್ಲಾ ಆ ಮಟ್ಟದಲ್ಲಿಯೇ ನಡೆಯುತ್ತದೆ.

*''ಅಂಗ ಅನಂಗವೆಂಬೆರಡು ಅಳಿದು,*
*ನಿಜದಲ್ಲಿ ನಿಂದ ಲಿಂಗೈಕ್ಯನ ಅಂಗದಲುಳ್ಳ*
*ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳು ನೋಡಾ*
*ಮನೋಲಯವಾಗಿಪ್ಪ ನಿಜಲಿಂಗೈಕ್ಯನ*
*ಅನುಭಾವವೆಲ್ಲವೂ ಜ್ಞಾನಶಬ್ದನೋಡಾ*
*ತನ್ನಲ್ಲಿ ತಾನು ತದ್ಗತವಾಗಿಪ್ಪ ಶಿವಯೋಗಿಗೆ*
*ಭಿನ್ನವಿಲ್ಲ ನೋಡಾ ಗುಹೇಶ್ವರ ಸಾಕ್ಷಿಯಾಗಿ'' (೯೫೫)*

ಎಂದು ಮುಕ್ತಾಯಕ್ಕನಿಗೆ ಹೇಳುವಾಗ ಆತನ ಅನುಭಾವದ ಸ್ವರೂಪ ಅರಿವಾಗುತ್ತದೆ. ಹಾಗೆಯೇ ಸಿದ್ಧರಾಮನ ಬಳಿಗೆ ಬಂದಾಗ ಹೇಳುವ ಈ ಮಾತನ್ನು ನೋಡಬಹುದು.

*ತನುವೆಂಬ ಏರಿಗೆ ಮನವೆಂಬ ಕಟ್ಟೆ,*
*ಆಚಾರವೆಂಬ ಸೋಪಾನ,*
*ಪರಮಾನಂದವೆಂಬ ಜಲವ ತುಂಬಿ,*
*ಕೆರೆಯ ಕಟ್ಟಬಲ್ಲವರನಾರನೂ ಕಾಣೆ,*
*ನಾ ಕಟ್ಟಿದರೆ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ*
*(೭೭೩)*

ಹೀಗೆ ವಿಶ್ವವೆಲ್ಲಾ ಕುಡಿದರೂ ಬತ್ತದಿರುವ ಅನುಭಾವದ ಕೆರೆಯನ್ನು ಕಟ್ಟಿದವನು ಅಲ್ಲಮಪ್ರಭು.

ಮುಕ್ತಾಯಕ್ಕ ಸಿದ್ಧರಾಮ ಇವರ ಪ್ರಸಂಗಗಳಲ್ಲಿ ಕಾಣುವಂತೆಯೇ ಇತರ ಎಲ್ಲ ಸನ್ನಿವೇಶಗಳಲ್ಲಿಯೂ ಅಲ್ಲಮ ಪ್ರಭುವಿನಲ್ಲಿ ಅನುಭಾವವೇ ಪ್ರಧಾನವಾಗಿ ಉಳ್ಳ ಮನೋಧರ್ಮವನ್ನು ಕಾಣುತ್ತೇವೆ. ಆತನ ಅರ್ಥದಲ್ಲಿ ಅನುಭಾವವೆಂಬುದು, ಮರಣದ ನಂತರ ಪಡೆಯುವ ಮುಕ್ತಿಯಲ್ಲ. ಈ ಕೆಳಗಿನ ವಚನದಲ್ಲಿ ಅದರ ಸ್ವರೂಪವನ್ನು ಬಹಳ ಸುಂದರವಾಗಿ ಹೇಳಿದ್ದಾನೆ :

*ಸತ್ತಬಳಿಕ ಮುಕ್ತಿಯ ಹಡೆದಿಹೆನೆಂದು*
*ಪೂಜಿಸಹೋದರೆ ಆ ದೇವರೇನ ಕೊಡುವರೋ?*
*ಸಾಯದೆ ನೋಯದೆ ಸ್ವತಂತ್ರವಾಗಿ ಸಂದು*
*ಭೇದವಿಲ್ಲದಿರ್ಪ ಗುಹೇಶ್ವರಾ ನಿಮ್ಮ ಶರಣ (೧೧೦)*

*(ಮುಂದುವರಿಯುತ್ತದೆ)*





# ಶ್ರೀ ಶಿವಯೋಗಿ ಸಿದ್ಧೇಶ್ವರರು

*- ಹೆಚ್. ಗಂಗಾಧರನ್*
*ನಂ. ೧೦೮೯, ವಿಷ್ಣುವರ್ಧನ್ ರಸ್ತೆ,*
*ಚಾಮರಾಜಪುರಂ, ಮೈಸೂರು-೪.*

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಆದಿಯಲ್ಲಿ ಅನುಷ್ಠಾನಮಾಡಿ ಶ್ರೀಮಠವನ್ನು ಸ್ಥಾಪಿಸಿದ ಮೂಲಪುರುಷರು ಶ್ರೀ ಶಿವಯೋಗಿ ಸಿದ್ಧೇಶ್ವರರು. ಅವರು ಆರು ಶತಮಾನಗಳ ಹಿಂದೆ ಹರದನ ಹಳ್ಳಿಯ ಗೋಸಲ ಪೀಠಾಧೀಶ್ವರರಾಗಿದ್ದು ಈ ಪ್ರಾಂತ್ಯಕ್ಕೆ ಬಿಜಯಂಗೈಸಿದ ಶಿವಯೋಗಿಗಳು. ಗುರುಪರಂಪರೆಯನ್ನು ಎಡೆಯೂರು ತೋಂಟದಸಿದ್ಧಲಿಂಗೇಶ್ವರರ ವಚವೊಂದರಿಂದ ತಿಳಿಯಬಹುದು.



ಶ್ರೀ ಶಿವಯೋಗಿ ಸಿದ್ಧೇಶ್ವರರು

ಅನಾದಿಗಣೇಶ್ವರನ ಶಿಷ್ಯ ಆದಗಣೇಶ್ವರರು

*''ಹರದನಹಳ್ಳಿಯ ಗೋಸಲ ದೇವರ ಶಿಷ್ಯರು ಶಂಕರದೇವರು*
*ಶಂಕರದೇವರ ಶಿಷ್ಯರು ದಿವ್ಯಲಿಂಗ ದೇವರು;*
*ದಿವ್ಯಲಿಂಗದೇವರ ಶಿಷ್ಯರು ಚೆನ್ನಬಸವೇಶ್ವರ ದೇವರು;*
*ಚೆನ್ನಬಸವೇಶ್ವರರ ದೇವರ ಕರಕಮಲದಲ್ಲಿ ಉತ್ಪತ್ತಿಯಾದ*
*ಶಿಶು ಸಿದ್ಧಲಿಂಗನಾನಯ್ಯಾ .............................*
*......................................................................*
*ಮಹಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ''*

ಎಂದಿದೆ. ಗೋಸ ದೇವರ ಹೆಸರೇ ಗೋಸಲಸಿದ್ಧೇಶ್ವರರೆಂಬುದು. ಹರದನಹಳ್ಳಿಯಿಂದ ಬಂದು ಶಿವಗಂಗಾ ಕ್ಷೇತ್ರದಲ್ಲಿ ಸಂಚರಿಸಿ ಸಿದ್ಧಗಂಗಾ ಬೆಟ್ಟದಲ್ಲಿ ನೆಲಸಿ ಅನುಷ್ಠಾನಿತರಾದರು. ಅಲ್ಲಿನ ಬೆಟ್ಟದಲ್ಲಿರುವ ಗವಿಯಲ್ಲಿ ಬಹು ಕಾಲ ತಪಸ್ಸನ್ನಾಚರಿಸಿ ಸಿದ್ಧಿಯನ್ನು ಪಡೆದರು. ಅವರ ತಪೋ ಮಹಿಮೆಗೆ ಆಕರ್ಷಿತರಾಗಿ ಅನೇಕ ಶಿವಯೋಗಿಗಳು ಅವರಲ್ಲಿಗೆ ಆಗಮಿಸುತ್ತಿದ್ದರು. ಧರ್ಮಬೋಧೆಯನ್ನು ಬಿಟ್ಟು ಬಾಹ್ಯ ವ್ಯವಹಾರಗಳಲ್ಲಿ ಅವರು ಹೆಚ್ಚು ಆಸಕ್ತರಾಗಲಿಲ್ಲ. ತಮ್ಮ ತಪಸ್ಸಾಧನೆಯಿಂದ ಜಂಗಮರ ದಣಿವಾರಿಸಲು ಶಿಲೆಯಿಂದ ಜಲ ಬರಿಸಿದರು. ಸಿದ್ಧಿ ಪಡೆದ ಸಿದ್ದೇಶ್ವರರಿಂದ ಗಂಗೋತ್ಪತ್ತಿಯಾದ ಈ ಕ್ಷೇತ್ರಕ್ಕೆ ಸಿದ್ಧಗಂಗೆಯೆಂಬ ಅಭಿದಾನವುಂಟಾಯಿತು. ಆದರೆ ಈ ಕ್ಷೇತ್ರಕ್ಕೆ ಅದಕ್ಕೆ ಮುನ್ನ ಬೇರೆ ಹೆಸರಿರಬೇಕು ಎನಿಸದಿರದು. ಜನಸಾಮಾನ್ಯರ ದೃಷ್ಟಿಯಲ್ಲಿ ಈ ಕ್ಷೇತ್ರ ಸುವರ್ಣ ಭೂಮಿಯೇ ಆಗಿರಬೇಕು. ವಂತಕಾಲದಲ್ಲಿ ಬೆಟ್ಟದ ಮೇಲೆ ಬೆಳೆದ ಹೂಗಿಡಗಳು ಪಲ್ಲವಿಸಿದಾಗ ಬಣ್ಣದ ಪ್ರಕೃತಿ ಸೌಂದರ್ಯವನ್ನು ಕಾಣಬಹುದಿತ್ತು. ಈಗ್ಗೆ ಐವತ್ತು ವರ್ಷಗಳ ಹಿಂದೆ ಈ ಭವ್ಯ ಸೊಬಗನ್ನು ನೋಡಿ ಆನಂದಪಟ್ಟವರು ಬಹಳ ಜನರಿದ್ದಾರೆ. ಶಿವಯೋಗಿಗಳು ತಪೋನಿರತರಾದ ಕಾರಣ ಈ ಬೆಟ್ಟದಲ್ಲಿ ಗಿಡಮರಗಳ ಸೊಂಪಿತ್ತು, ಪ್ರಕೃತಿ ತಂಪಾಗಿತ್ತು. ಆದ ಕಾರಣ ಇದನ್ನು ಕನಕಗಿರಿಯೆಂದು ಕರೆಯುತ್ತಿದ್ದರೆಂದು ಕಂಡುಬರುತ್ತದೆ.

ಗಂಗೆಯು ಉತ್ಪತ್ತಿಯಾದ ನಂತರ ಅವರ ಶಿವಯೋಗ ಶಿಷ್ಯ ಪರಂಪರೆ ಈ ಕ್ಷೇತ್ರವನ್ನು ಸಿದ್ಧಗಂಗೆಯೆಂದು ಕರೆದಿದ್ದಾರೆ. ಮುಂದೆ ಅದೇ ಅಭಿದಾನ ಮುಂದುವರೆದಿದೆ.

ಶ್ರೀ ಸಿದ್ಧಲಿಂಗೇಶ್ವರರ ಒಂದು ವಚನ ಗಮನಾರ್ಹ

*''ಕನಕಗಿರಿವಾಸಂ, ಕಾಮನಾಶಂ, ಕಮಲವೈರಿಭೂಷರಿ*
*ವಿನತನಾಮಧೇಯಂ, ಅನುಪಮಾವತಾರಸಾರಂ;*
*ಪರಮವೀರಶೈವಭಕ್ತಿಭಾವಂ ಜನಿತ ಪುಣ್ಯ ರಾಯಾ*
*ಭವರೋಗ ವೈದ್ಯ ಭವ ಹರಂ*
*ಹರ ಹರಾ ಶಿವಶಿವಾ ಜಯ ಜಯ ಜಯತು*
*ಶರಣ ಕರುಣಾಕರ ತ್ರಾಹಿಮಾರಿಂ ಭಕ್ತವತ್ಸಲ ಮತ್ಪ್ರಾಣನಾಥ*
*ಮಹಲಿಂಗ ಗುರುಶಿವಸಿದ್ದೇಶ್ವರ ಪ್ರಭುವೇ''*

ಎಂದಿದ್ದಾರೆ.

ಈ ವಚನವು ತಮ್ಮನ್ನು ತತ್ತ್ವಾಮೃತ ಧಾರೆಯಿಂದ ಪುನೀತರಾಗಿ ಮಾಡಿದ ಸಿದ್ದೇಶ್ವರರನ್ನು ಕುರಿತು ನುಡಿದ ಸ್ತುತಿಯೇ ಆಗಿದೆಯೆನ್ನಬಹುದು.

ಶ್ರೀ ಸಿದ್ಧಲಿಂಗೇಶ್ವರಿಗಿನ್ನ ಮುನ್ನಿನ ಶರಣರು ಕಲ್ಯಾಣದ ಶರಣರು ತಮ್ಮ ಆರಾಧ್ಯಮೂರ್ತಿಯ ನಾಮವನ್ನು ಕೆಲವರೂ ತಮ್ಮ ಆಧ್ಯಾತ್ಮ ಗುರುಗಳ ನಾಮವನ್ನು ಕೆಲವರೂ ತಮ್ಮ ವಚನಗಳ ಅಂಕಿತವಾಗಿಟ್ಟುಕೊಂಡಿರುವುದು ಕಂಡುಬರುತ್ತದೆ. ಶ್ರೀ ಸಿದ್ಧಲಿಂಗೇಶ್ವರರು ತಾವು ಶ್ರೀ ಚೆನ್ನಬಸವೇಶ್ವರರ ಮೂಲ ಸಂಜಾತರಾದರೂ ತಮ್ಮ ವಚನಗಳಿಗೆ ಗುರುಸಿದ್ದೇಶ್ವರ ಪ್ರಭುವೇ ಎಂಬ ಅಂಕಿತವನ್ನಿಟ್ಟುಗೊಂಡಿರುವುದು ಗಮನಾರ್ಹ. ಈ ಕ್ಷೇತ್ರಾಧೀಶ್ವರರಾದ ಶ್ರೀ ಸಿದ್ದೇಶ್ವರರಾಶೀರ್ವಾದಕ್ಕಾಗಿ ಅವರ ಶಿಷ್ಯ ಪರಂಪರೆಯವರಾದ ಶಂಕರಸ್ವಾಮಿಗಳು ಇಲ್ಲಿಗೆ ಬಂದು ಅನುಷ್ಠಾನಮಾಡಿ ಕೊರಟಗೆರೆಯ ಸಿದ್ಧರ ಬೆಟ್ಟದಲ್ಲಿ ಸಮಾಧಿಸ್ಥರಾಗಿದ್ದಾರೆ. ನಂತರ ಚೆನ್ನಬಸವೇಶ್ವರರೂ ಈ ಕ್ಷೇತ್ರದಲ್ಲಿ ಅನುಷ್ಠಾನಮಾಡಿ ಅನುಗ್ರಹಿತರಾಗಿದ್ದಾರೆ ಮತ್ತು ಗುಬ್ಬಿಯಲ್ಲಿ ಐಕ್ಯಗೊಂಡಿದ್ದಾರೆ. ಅಂತೆಯೇ ಶ್ರೀ ಸಿದ್ಧಲಿಂಗೇಶ್ವರರು ಬಾಲ್ಯದಲ್ಲಿಯೇ ಇಲ್ಲಿಗೆ ಆಗಮಿಸಿ ಅನುಷ್ಠಾನಮಾಡಿ ಶ್ರೀ ಗುರುವಿನಿಂದ ಅನುಗ್ರಹಿತರಾಗಿದ್ದಾರೆ. ಇಲ್ಲಿ ಅವರಿಗೆ ಶ್ರೀ ಗುರುಕೃಪೆಯಿಂದ ಸಕಲ ವಿದ್ಯೆಗಳೂ ಸಿದ್ಧಿಸಿವೆ. ಆದುದರಿಂದಲೇ ಇದು ಭಕ್ತರ ಇಷ್ಟಾರ್ಥವನ್ನು ಕರುಣಿಸುವ ಸಿದ್ಧಿ ಕ್ಷೇತ್ರವಾಗಿದೆ. ಅದು ಈ ಪೀಠದ ಪರಂಪರೆಗೆ ಲಭ್ಯವಾಗುತ್ತಾ ಬಂದಿದೆ. ಶ್ರೀ ಸಿದ್ದೇಶ್ವರರು ಬಹುಕಾಲ ಬದುಕಿದ ಮಹನೀಯರು. ಆದ ಕಾರಣ ಅನೇಕ ಶರಣರು ಇಲ್ಲಿ ಗೈತಂದಿದ್ದಾರೆ. ಗುಬ್ಬಿಯ ಚನ್ನಬಸವೇಶ್ವರರ ಕೃಪಾಪಾತ್ರರಾದ ಮಲ್ಲಣಾಚಾರ್ಯ ಪರಂಪರೆಯವರು ಇಲ್ಲಿನ ಕೃಪೆಗೆ ಪಾತ್ರರಾದವರೇ ಆಗಿದ್ದಾರೆ. ಅವರ ಪರಂಪರೆಯ ಶಾಂತೇಶನು ಬರೆದ ಕಾವ್ಯದ ನಾಮಧೇಯ ಸಿದ್ದೇಶ್ವರ ಪುರಾಣವೆಂದಿದೆ. ಆದರಲ್ಲಿ ಶ್ರೀ ಸಿದ್ಧಲಿಂಗೇಶ್ವರರ ಜೀವನಕ್ಕೆ ಸಂಬಂಧಪಟ್ಟ ಯಾವ ಘಟನೆಗಳ ವಿವರಗಳಿಲ್ಲ. ಅದು ಗುರುಶಿಷ್ಯನಿಗೆ ಮಾಡಿದ ಧರ್ಮಬೋಧೆಯಾಗಿದೆ. ಈ ಪೀಠದ ಪರಂಪರೆಯವರೇ ಆದ ವಿರಕ್ತ ತೋಂಟದಾರ್ಯರು ಸಿದ್ದೇಲಿಂಗೇಶ್ವರರ ಚರಿತ್ರೆಯನ್ನು ಕುರಿತು ಕಾವ್ಯವನ್ನು ಬರೆದರು ಸಹ ಅದನ್ನು ಸಿದ್ದೇಶ್ವರ ಪುರಾಣವೆಂದು ಪ್ರತಿಯೊಂದು ಸಂಧಿಯ ಅಂತ್ಯಪದದಲ್ಲಿ ಹೇಳಿದ್ದಾರೆ. ಶ್ರೀ ಸಿದ್ಧಲಿಂಗೇಶ್ವರರು ಶ್ರೀ ಸಿದ್ದೇಶ್ವರರಲ್ಲಿ ಅನನ್ಯ ಭಕ್ತಿಯನ್ನು ಇಟ್ಟುಕೊಂಡಿರುವುದನ್ನು ಅವರ ವಚನಗಳ ಅಂಕಿತವನ್ನು ಗಮನಿಸಿದ ಕವಿಗಳು ತಮ್ಮ ಪುರಾಣಗಳಿಗೂ ಗುರುವಿನ ನಾಮವನ್ನು ಇಟ್ಟಿರಬಹುದೆನ್ನಬಹುದು. ಗೋಸಲ ಪೀಠದ ಪರಂಪರೆಯ ಜಗದ್ಗುರುಗಳವರು ತುಮಕೂರು ಜಿಲ್ಲೆಯಲ್ಲಿ ನೆಲೆಸಿರುವುದು, ಶರಣ ಸಂಸ್ಕೃತಿಯನ್ನು ದ್ಧರಿಸಿದ ಶೂನ್ಯ ಸಂಪಾದನಕಾರರು, ಮಹಾಕಾವ್ಯಗಳ ಕರ್ತೃಗಳು ಈ ಪ್ರಾಂತ್ಯದವರಾದ್ದರಿಂದ ಶ್ರೀ ಕ್ಷೇತ್ರವೇ ಶ್ರೀ ಸಿದ್ಧಲಿಂಗೇಶ್ವರರಿಗೂ ಅವರ ಶಿಷ್ಯ ಪರಂಪರೆಯ ಮಹಾನ್ ಕಾರ್ಯಗಳಿಗೂ ಪ್ರೇರಕ ಕೇಂದ್ರವಾಗಿತ್ತೆಂಬುದನ್ನು ಇಲ್ಲಿ ಸ್ಮರಿಸಬಹುದು.

ಕರಿ ಘನ ಅಂಕುಶ ಕಿರಿದೆನ್ನಬಹುದೇ? ಬಾರದಯ್ಯಾ,
ಗಿರಿ ಘನ ವಜ್ರ ಕಿರಿದೆನ್ನಬಹುದೇ? ಬಾರದಯ್ಯಾ;
ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ? ಬಾರದಯ್ಯಾ,
ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನಬಹುದೇ?
ಬಾರದಯ್ಯಾ, ಕೂಡಲ ಸಂಗಮದೇವಾ.

- ಬಸವಣ್ಣ

ಎಸಳು ಬಿಟ್ಟು, ಕುಸುಮ ಉದುರಿ, ನಸುಫಲ ನಿಂದಲ್ಲಿ,
ಹಣ್ಣಿನ ಎಸಕದ ರಸ ಎಲ್ಲಿ ಇದ್ದಿತ್ತು?
ಆ ವೃಕ್ಷದ ಬೇರಿನ ಸಾರದಲ್ಲಿ ಇದ್ದಿತ್ತು.
ಬೇರಿನ ಸಾರ ಒಣಗೆ, ಹಣ್ಣಿನ ಸಾರ ಅಲ್ಲಿಯೇ ಅಡಗಿತ್ತು
ಆ ಗುಣವ ನೀ ತಿಳಿ, ಕಾಮಧೂಮ ಧೂಳೇಶ್ವರನಲ್ಲಿಯೆ.

- ಮಾದಾರ ಧೂಳಯ್ಯ





# ನಿಜವಾದ ಧರ್ಮಾಚರಣೆ

*– ಸ್ವಾಮಿ ಸೌಖ್ಯಾನಂದ*
*ವಿವೇಕಾನಂದ ಆಶ್ರಮ*
*ಆಲಸೂರು, ಬೆಂಗಳೂರು – 8*

ಇಂದಿನ ಧರ್ಮದ ಭಾವನೆ ಯಾವ ಮಟ್ಟಕ್ಕೆ ಬಂದಿದೆ ಎಂದರೆ, ನಾವು ಒಂದು ದೇವಸ್ಥಾನಕ್ಕೆ ಹೋಗುವುದೋ, ಅಲ್ಲಿ ಹಣೆಗೆ ಸ್ವಲ್ಪ ತಿಲಕ ಹಚ್ಚಿಕೊಳ್ಳುವುದೋ, ಸ್ವಲ್ಪ ತೀರ್ಥಪ್ರಸಾದ ತೆಗೆದುಕೊಳ್ಳುವುದೋ, ಅಥವಾ ಯಾವುದಾದರೂ ಆಶ್ರಮಕ್ಕೆ ಬಂದು ನಿಕಟ ಸಂಪರ್ಕವನ್ನು ಇಟ್ಟುಕೊಂಡು ಮಧ್ಯೆ ಮಧ್ಯೆ ಹೋಗಿ ಬಂದು, ಸ್ವಲ್ಪ ಪ್ರಸಾದ ಸ್ವೀಕರಿಸಿದರೆ ನಾವು ಧಾರ್ಮಿಕರಾಗಿದ್ದೇವೆ, ನಾವು ಭಕ್ತರು ಆಗಿದ್ದೇವೆ ಎಂಬುದೇ ಆಗಿದೆ.

ಆದರೆ ಅವರು ಮನೆಯಲ್ಲಿ ಯಾವ ಅನಾಚಾರವನ್ನಾದರೂ ಎಸಗಬಹುದು. ಲಂಚ ತೆಗೆದುಕೊಳ್ಳಬಹುದು, ಕಪ್ಪು ಹಣ ಸಂಗ್ರಹಿಸಬಹುದು ಅಥವಾ ಇನ್ನೊಬ್ಬರ ಹತ್ಯೆಯನ್ನು ಸಹ ಗೈಯಬಹುದು. ಅವರು ತಮ್ಮ ಮನೆಯಲ್ಲಿ ಮತ್ತು ಮನಸ್ಸಿನಲ್ಲಿ ಏನು ಆಗಿದ್ದರೂ ಅದು ಅವರಿಗೆ ಮುಖ್ಯವಲ್ಲ. ನಾವು ಆಶ್ರಮಕ್ಕೋ, ದೇವಸ್ಥಾನಕ್ಕೋ ಹೋಗಿ ಬಂದರೆ ನಮ್ಮ ಪಾಪವೆಲ್ಲ ನಾಶ, ನಾವು ಧಾರ್ಮಿಕರು ಎಂಬ ಭಾವನೆ ಅವರದು. ಇದು ತಿಳಿಯದವರಿಗಿಂತ ತಿಳಿದವರಲ್ಲೆ ಹೆಚ್ಚು. ಎಂಬುದು ನಾವು ನಮ್ಮ ಸಮಾಜವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ತಿಳಿದು ಬರುವ ಅಂಶ. ಇದಕ್ಕೆ ನಮ್ಮ ಮನಸ್ಸಿನ ದುರ್ಬಲತೆ ಒಂದು ಕಾರಣವಾದರೆ, ಇನ್ನೊಂದು ನಾವು ಧರ್ಮವೆಂದರೇನು ಎಂಬುದನ್ನ ಸರಿಯಾಗಿ ತಿಳಿಯದಿರುವುದೆ ಆಗಿದೆ. ಆದ್ದರಿಂದ ಪ್ರತಿಯೊಬ್ಬ ಧಾರ್ಮಿಕನಾಗಬಯಸುವ ವ್ಯಕ್ತಿಯೂ ಸಹ ಧರ್ಮ ಎಂದರೇನು, ಅದರ ಆಚರಣೆ ಹೇಗೆ ಎಂದು ತಿಳಿದು ನಡೆದರೆ ನಿಜವಾದ ಧರ್ಮಾಚರಣೆಯಾಗುತ್ತದೆ, ನಾವು ನಿಜವಾದ ಧಾರ್ಮಿಕರಾಗುತ್ತೇವೆ.

ವಿವೇಕಾನಂದರ ದೃಷ್ಟಿಯಲ್ಲಿ ಧರ್ಮವೆಂದರೆ ಮೃಗ ಸದೃಶನಾದವನನ್ನು ಮಾನವನನ್ನಾಗಿಸಿ, ಮಾನವನನ್ನು ದೇವನನ್ನಾಗಿಸುವ ಭಾವನೆ. ಎಷ್ಟು ಸರಳವಾಗಿ, ಸ್ಪಷ್ಟವಾಗಿ ಹೇಳಿದ್ದಾರೆ ! ಇಷ್ಟು ಸರಳವಾಗಿ ಸ್ಪಷ್ಟವಾಗಿ ಯಾರೂ ಧರ್ಮದ ಬಗ್ಗೆ ವ್ಯಾಖ್ಯಾನ ಮಾಡಿರಲಾರರು.

ಮನುಷ್ಯನಲ್ಲಿ ಮೂರು ಗುಣಗಳು ಆಗಲೆ ಇವೆ. ಅವೆಂದರೆ ಪಶುಗುಣ, ಮನುಷ್ಯಗುಣ ಮತ್ತು ದೈವಗುಣ. ಈ ಮೂರು ಗುಣಗಳಲ್ಲಿ ಒಂದಕ್ಕಿಂತ ಒಂದು ಉತ್ತಮವಾದುದು ಪಶು ಗುಣಕ್ಕಿಂತ ಮನುಷ್ಯಗುಣ, ಮನುಷ್ಯಗುಣಕ್ಕಿಂತ ದೈವೀಗುಣ.

ನಿಜಕ್ಕೂ ನಾವು ದೈವೀ ಸ್ವರೂಪರೇ. ನಾವು ನಮ್ಮ ನಿಜವಾದ ಸ್ವರೂಪವನ್ನು ಅರಿಯುವುದೇ ಸಕಲ ಧರ್ಮಾಚರಣೆಯ ಉದ್ದೇಶವಾಗಿದೆ. ಕೆಲವು ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡು, ಅವುಗಳನ್ನು ನಿತ್ಯಜೀವನದಲ್ಲಿ ಆಚರಣೆಗೆ ತರುವುದರಿಂದ ಮನುಷ್ಯನು ಮೃಗೀಯ ಗುಣಗಳಿಂದ ಪಾರಾಗಿ ಮಾನವನಾಗುತ್ತಾನೆ. ಮಾನವನ ಗುಣಗಳನ್ನು (ಮನುಷ್ಯತ್ವದಿಂದ) ಮೀರಿ ದೈವಸ್ವರೂಪವನ್ನು ಹೊಂದುತ್ತಾನೆ. ಇದರಿಂದ ಮನುಷ್ಯನ ಜೀವನ ಸಾರ್ಥಕವಾಗುತ್ತದೆ. ಮನುಷ್ಯನ ಜೀವನ ಧನ್ಯವಾಗುತ್ತದೆ. ಇಂತಹ ಆಧ್ಯಾತ್ಮಿಕ ಮೌಲ್ಯಗಳು ನಮ್ಮ ಶಾಸ್ತ್ರದಲ್ಲಿ ನೂರಾರಿವೆ. ಆದರೆ ಇಲ್ಲಿ ಕೆಲವು ಮುಖ್ಯ ಮೌಲ್ಯಗಳನ್ನು ಸಕಲರೂ ಆಚರಿಸಬೇಕಾಗುತ್ತದೆ. ಅಂತಹ ಕೆಲವು ಆಧ್ಯಾತ್ಮಿಕ ಮೌಲ್ಯಗಳನ್ನು ಕುರಿತು ಸ್ವಲ್ಪ ಚಿಂತಿಸುವ. ಇವುಗಳ ಆಚರಣೆಯಿಂದ ಮನುಷ್ಯ ನಿಜವಾದ ಅರ್ಥದಲ್ಲಿ ಧಾರ್ಮಿಕನಾಗುತ್ತಾನೆ.

ಅವೆಂದರೆ, ಅಹಿಂಸೆ, ಸತ್ಯ, ಕಳ್ಳತನ ಮಾಡದಿರುವುದು. ನೈರ್ಮಲ್ಯ, ಇಂದ್ರಿಯ ನಿಗ್ರಹ, ದಾನ, ದಯೆ, ಶಿಸ್ತು, ತಾಳ್ಮೆ ಇತ್ಯಾದಿ. ಹೀಗೆ ಅನೇಕ ನೈತಿಕ, ಆಧ್ಯಾತ್ಮಿಕ ಮೌಲ್ಯಗಳ ಪಟ್ಟಿಯನ್ನೇ ನೀಡಬಹುದು. ಆದರೆ ಪಟ್ಟಿಯನ್ನು ನೋಡಿ, ಓದುಗರಿಗೆ ಭಯವಾಗಬಹುದು. ಆದ್ದರಿಂದ ಮೇಲೆ ಹೇಳಿದ ಕೆಲವು ಮೌಲ್ಯಗಳನ್ನು ಸ್ವಲ್ಪ ಚಿಂತಿಸುವ.

**ಅಹಿಂಸೆ :** ಅಹಿಂಸೆ ಎಂದರೆ ಹಿಂಸೆಮಾಡದಿರುವುದು, ಬೇರೆ ಪ್ರಾಣಿಗಳನ್ನು ಕೊಲ್ಲದಿರುವುದು, ಅಥವಾ ಭೌತಿಕವಾಗಿ ತೊಂದರೆ ಕೊಡದಿರುವುದು ಎಂಬುದು ಸಾಮಾನ್ಯ ತಿಳುವಳಿಕೆ. ಆದರೆ ಇಲ್ಲಿ ಅಹಿಂಸೆ ಎಂದರೆ ಕಾಯಕವಾಗಿ, ಮಾನಸಿಕವಾಗಿ, ವಾಚಿಕವಾಗಿ ಆಗಲಿ ಬೇರೆಯವರಿಗೆ ಅನಿಷ್ಟವನ್ನು ಬಯಸದಿರುವುದೆ ಅಹಿಂಸೆಯೆಂದೆನಿಸಿಕೊಳ್ಳುತ್ತದೆ. ಬೇರೆಯವರಿಗೆ ಹಿಂಸೆ ಗೈಯದಿರುವುದು ಧಾರ್ಮಿಕ ಜೀವನದಲ್ಲಿ ಅತ್ಯುನ್ನತವಾದ ಸದ್ಗುಣ. ಆದರೆ ನಾವು ಇಲ್ಲಿ ನೆನಪಿಡಬೇಕಾದ ಅಂಶವೆಂದರೆ ನಾವು ಸಹ ಬೇರೆಯವರಿಂದ ಹಿಂಸೆಗೊಳಗಾಗದೆ ನಮ್ಮನ್ನು ಕಾಪಾಡಿಕೊಳ್ಳಬೇಕು. ಇದು ಅಹಿಂಸೆಯನ್ನು ಪಾಲಿಸುವಷ್ಟೆ ಮುಖ್ಯ.

ಸತ್ಯ : ಶ್ರೀರಾಮಕೃಷ್ಣರು ಹೇಳುವಂತೆ ಕಲಿಯುಗದಲ್ಲಿ ಸತ್ಯವೆ ತಪಸ್ಸು. ಇದರ ಆಚರಣೆ ಬಹಳ ಕಷ್ಟ. ಆದರೆ ಇದನ್ನು ಪಾಲಿಸಿದರೆ ಇದು ಸುರಕ್ಷಿತವಾಗಿ ನಮ್ಮನ್ನು ಸಕಲ ಬಂಧನಗಳಿಂದ ಮುಕ್ತಗೊಳಿಸಬಲ್ಲದು. ಅಷ್ಟು ಶಕ್ತಿ ಇದೆ ಸತ್ಯಪರಿಪಾಲನೆಗೆ. ಸತ್ಯವೆಂದರೆ ಇದ್ದದ್ದನ್ನು, ನೋಡಿದ್ದನ್ನು ಅಥವಾ ಕೇಳಿದ್ದನ್ನು ಯಾವ ಕಲಬೆರೆಕೆಗೈಯದೆ ಇದ್ದ ಹಾಗೆ, ನೋಡಿದ ಹಾಗೆ, ಕೇಳಿದ ಹಾಗೆ ಅದನ್ನು ತಿಳಿಸುವುದು. ಸತ್ಯವನ್ನು ಮನಸ್ಸಿನಲ್ಲಿ ಕಲಬೆರಕೆಗೈಯುವ ಯೋಚನೆಯನ್ನು ಸಹ ಮಾಡಬಾರದು. ಅದರಲ್ಲೂ ಸಹ ನಮ್ಮ ಹಿರಿಯರು ಬಹಳ ಸೂಕ್ಷ್ಮವಾಗಿ ಅಧ್ಯಯನಗೈದು ಹೇಳುತ್ತಾರೆ. ದುರುದ್ದೇಶದಿಂದ ಕೂಡಿದ ಸತ್ಯವು ಸಹ ಸುಳ್ಳೆಂದು ಪರಿಗಣಿಸಲ್ಪಡುತ್ತದೆ. ಇದರ ಅರ್ಥವೇನೆಂದರೆ ಮನುಷ್ಯ ಏನನ್ನು ಮನಸ್ಸಿನಲ್ಲಿ ಚಿಂತಿಸುತ್ತಾನೋ ಅದನ್ನೇ ನುಡಿಯಬೇಕು. ನಡೆ-ನುಡಿ ಒಂದಾಗಬೇಕು. ಇದೇ ಸತ್ಯ.

ಅಪರಿಗ್ರಹ : ಮುಂದಿನದೆ ಕಳ್ಳತನ ಮಾಡದಿರುವುದು. ಕದಿಯದಿರುವುದು ಎಂದರೆ ನಮ್ಮೆಲ್ಲರಿಗೂ ಸುಲಭವಾಗಿ ಅರ್ಥವಾಗುತ್ತದೆ. ಬೇರೆಯವರ ವಸ್ತುವನ್ನು ಅವರಿಗೆ ತಿಳಿಯದಂತೆಯೇ ಅಥವಾ ಅವರ ಅನುಮತಿಯಿಲ್ಲದೆ ಅಪಹರಿಸುವುದಕ್ಕೆ ಕಳ್ಳತನ ಎನ್ನುತ್ತೇವೆ. ಆದರೆ ಆಧ್ಯಾತ್ಮಿಕ ಜೀವಿ ತನ್ನ ಅಗತ್ಯಕ್ಕಿಂತ ಹೆಚ್ಚಿನದನ್ನು ಸಂಗ್ರಹಿಸಿದರೆ, ಅದು ಕಳ್ಳತನವೆಂದು ಎಣಿಸಲ್ಪಡುತ್ತದೆ. ಆದ್ದರಿಂದ ಧಾರ್ಮಿಕ ವ್ಯಕ್ತಿ ತನ್ನ ಅಗತ್ಯಕ್ಕಿಂತ, ಹೆಚ್ಚಿನದನ್ನು ಸಂಗ್ರಹಿಸ ಕೂಡದು.

ನೈರ್ಮಲ್ಯ : ಮಲ ಎಂದರೆ ಕೊಳಕು, ಕಸ ಎಂದರ್ಥ. ನಿರ್ಮಲವೆಂದರೆ ಮಲರಹಿತ, ಅಂದರೆ ಪರಿಶುದ್ಧ ಪವಿತ್ರವೆಂದರ್ಥ. ಈಗಿನ ಕಾಲದಲ್ಲಿ ದೊರೆಯುವ ಸೋಪುಗಳಿಂದ ನಾವು ನಮ್ಮ ದೇಹಗಳನ್ನು ತೊಳೆದು ಪರಿಶುದ್ಧವಾಗಿಡಬಹುದು. ಸ್ವಚ್ಛವಾಗಿಡಬಹುದು. ಆದರೆ ಭಗವಂತನ ಚಿಂತನೆಯಿಂದ ತನ್ನ ಆಂತರ್ಯವನ್ನು ಶುದ್ಧಗೊಳಿಸಬೇಕು, ಪವಿತ್ರಗೊಳಿಸಬೇಕು. ಆಗ ವ್ಯಕ್ತಿ ಒಳಗೂ-ಹೊರಗೂ ಪವಿತ್ರನಾಗಿ, ನಿರ್ಮಲನಾಗುತ್ತಾನೆ.

ಇಂದ್ರಿಯನಿಗ್ರಹ : ನಮ್ಮ ಈಗಿನ ಎಲ್ಲ ದುರವಸ್ಥೆಗೂ ಕಾರಣ, ನಮ್ಮ ಇಂದ್ರಿಯಗಳು ನಮ್ಮ ಹತೋಟಿಯಲ್ಲಿ ಇಲ್ಲದಿರುವುದು. ಆದರೆ ನಮ್ಮ ದೈವತ್ವವನ್ನು ತಿರುಗಿ ಪಡೆಯಬೇಕಾದರೆ ನಮ್ಮ ಇಂದ್ರಿಯಗಳನ್ನು ವಿಷಯ ವಸ್ತುಗಳಿಂದ ಹಿಂತೆಗೆದುಕೊಳ್ಳಬೇಕು; ಅವುಗಳನ್ನು ನಮ್ಮ ಅಧೀನದಲ್ಲಿಟ್ಟುಕೊಳ್ಳಬೇಕು. ಈ ಕೆಲಸವನ್ನು ಇಂದ್ರಿಯ ನಿಗ್ರಹ ಎನ್ನುತ್ತಾರೆ.

ದಾನ : ಅಗತ್ಯವುಳ್ಳವರಿಗೆ ನಮ್ಮಲ್ಲಿರುವ, ನಮ್ಮಿಂದ ಕೈಲಾಗುವ ವಸ್ತುವನ್ನು ಯಾವ ಪ್ರತಿಫಲಾಪೇಕ್ಷೆ ಇಲ್ಲದೆ, ಅದರ ಬಗ್ಗೆ ಚಿಂತಿಸದೆ ಕೊಡುವ ಕ್ರಿಯೆಗೆ ದಾನವೆನ್ನುತ್ತಾರೆ. ಜ್ಞಾನದಾನ, ಅನ್ನದಾನ, ವಸ್ತುದಾನ, ದ್ರವ್ಯದಾನ ಹೀಗೆ ಅನೇಕ ತರಹದ ದಾನಗಳನ್ನು ಮಾಡಬಹುದು. ಸರಳವಾದ ಅರ್ಥವೇನೆಂದರೆ ಇರುವುದನ್ನು ಬೇರೆಯವರಿಗೆ ಕೊಡುವುದು. ಕೊಡುವಾಗ, ಶ್ರದ್ಧೆಯಿಂದ, ಅಹಂಕಾರರಹಿತವಾಗಿ, ಪ್ರೀತಿಯಿಂದ ಪ್ರತಿಫಲಾಪೇಕ್ಷೆ ಇಲ್ಲದೆ ಕೊಡಬೇಕು. ಆಗಲೇ ಅದು ನಿಜವಾದ ದಾನಾಗುತ್ತದೆ.

ದಯೆ : ದಯೆ ಎಂದರೆ ಇನ್ನೊಬ್ಬರಿಗೆ ಕರುಣೆ ತೋರುವುದು ಕಷ್ಟದಿಲ್ಲಿರುವ ವ್ಯಕ್ತಿ ಶತ್ರುವಾಗಿರಲಿ, ಮಿತ್ರನಾಗಿರಲಿ, ಆಗಂತಕನಾಗಿರಲಿ, ನೆಂಟನಾಗಿರಲಿ, ಆಪ್ತನಾಗಿರಲಿ, ತಂದೆ-ತಾಯಿಯಾದರೂ ಸರಿಯೆ, ಅದನ್ನು ವಿಚಾರಿಸದೆ ಕರುಣೆ ತೋರುವುದು, ಅಥವಾ ಪ್ರತಿಯೊಬ್ಬರನ್ನು ಸಹ ಒಂದೇ ತರಹ ಕರುಣೆಯಿಂದ ನೋಡುವುದು. ಇದಕ್ಕೆ ದಯೆಯೆನ್ನುತ್ತಾರೆ. ಶ್ರೀರಾಮಕೃಷ್ಣರು ಹೇಳುತ್ತಾರೆ : ''ಜೀವರಿಗೆ, ಜೀವನು ಕರುಣೆ ತೋರಲು ಅವನು ಯಾರು? ದೇವರೊಬ್ಬನೆ ಜೀವರಿಗೆ ಕರುಣೆ ತೋರಬಲ್ಲ. ಮನುಷ್ಯ ಹೆಚ್ಚೆಂದರೆ ಜೀವರ ಸೇವೆಗೈಯಬಹುದು ಅಷ್ಟೆ, ಕಷ್ಟದಲ್ಲಿರುವ ವ್ಯಕ್ತಿ ಯಾರೆಂದು ವಿಚಾರಿಸದೆ. ಪ್ರೀತಿಯಿಂದ ಅಂತಹ ವ್ಯಕ್ತಿಯ ಸೇವೆಗೈಯುವುದಕ್ಕೆ ದಯೆಯೆಂದು ಕರೆಯಬಹುದು.''

ಶಿಸ್ತು : ಶಿಸ್ತು ಎಂದರೆ ವ್ಯವಸ್ಥಿತವಾದ ಜೀವನ, ಕ್ರಮಬದ್ಧವಾದ ಜೀವನ. ಜೀವನದಲ್ಲಿ ಶಿಸ್ತು ಇಲ್ಲದವನು ಏನು ತಾನೆ ಸಾಧಿಸಬಲ್ಲ? ಆದ್ದರಿಂದ ಆಧ್ಯಾತ್ಮಿಕ ಜೀವಿಯಾಗಬಯಸುವ ವ್ಯಕ್ತಿ ಶಿಸ್ತಿನ ಜೀವನ ನಡೆಸಬೇಕು. ಮಾಡಬೇಕಾದುದದ್ದನ್ನು ಮಾಡುವುದು, ಮಾಡಬಾರದ್ದನ್ನು ಬಿಡುವುದು ಶಿಸ್ತೆನಿಸಿಕೊಳ್ಳುತ್ತದೆ.

ತಾಳ್ಮೆ : ತಾಳಿದವನು ಬಾಳಿಯಾನು, ತಾಳುವಿಕೆಗಿಂತ ತಪವಿಲ್ಲ, ಸಹನೆಯೇ ಕಲಿಯುಗದ ತಪಸ್ಸು, ಇದೆಲ್ಲ ನಮ್ಮ ಹಿರಿಯರ ಅನುಭವ. ಜೀವನದಲ್ಲಿ ಕಷ್ಟ ಸುಖ; ನೋವು ನಲಿವು, ಒಳ್ಳೆಯದು-ಕೆಟ್ಟದ್ದು ಒಂದಾದದ ಮೇಲೊಂದರಂತೆ ಬಂದೇ ಬರುತ್ತದೆ. ಅದನ್ನು ಯಾರೂ ತಡೆಯಲಾರರು. ಬಂದದ್ದೆಲ್ಲವನ್ನೂ ಪ್ರೀತಿಯಿಂದ, ಯಾವ ಚಿಂತೆಯನ್ನೂ ಮಾಡದೆ ಸಹಿಸುವುದಕ್ಕೆ ತಾಳ್ಮೆಯೆಂದು ಕರೆಯುತ್ತಾರೆ. ಇದು ನಮ್ಮನ್ನು ಅಮೃತತ್ವಕ್ಕೆ ಅರ್ಹರನ್ನಾಗಿಸುತ್ತದೆ. ತಾಳ್ಮೆ ಜೀವನದಲ್ಲಿ ಬಹಳ ಅವಶ್ಯಕ. ಹೀಗೆ ಅನೇಕ ಸದ್ಗುಣಗಳನ್ನು ಜೀವನದಲ್ಲಿ ಪಾಲಿಸುವ ವ್ಯಕ್ತಿ ಪರಿಶುದ್ಧನಾಗಿ, ತನ್ನಲ್ಲಿರುವ ದೈವತ್ವವನ್ನು ಪ್ರಕಟಿಸಲು ಸಮರ್ಥನಾಗುತ್ತಾನೆ. ಯಾರು ಹೀಗೆ ಸಮರ್ಥನಾಗುತ್ತಾನೊ ಅವನೇ ನಿಜವಾದ ಧಾರ್ಮಿಕ ವ್ಯಕ್ತಿ. ಈ ಆಧ್ಯಾತ್ಮಿಕ ಮೌಲ್ಯಗಳನ್ನು ಜೀವನದಲ್ಲಿ ಪಾಲಿಸುವ ಪ್ರಯತ್ನವೇ ಧಾರ್ಮಿಕ ಜೀವನ, ಇದುವೆ ನಿಜವಾದ ಧರ್ಮಾಚರಣೆ.

❖





# ''ನಿಮ್ಮ ಹೆಸರಿಟ್ಟು ಪೂಜಿಸುತ್ತೇನೆ''

– ಹೆಚ್.ವಿ. ವೀರಭದ್ರಯ್ಯ

ಸುಕ್ಷೇತ್ರ ಶಿವಗಂಗೆಯ ಮೇಲಣಗವಿಮಠದ ಪೂಜ್ಯ ಶ್ರೀ ಮಲಯಶಾಂತಮುನಿ ದೇಶಿಕೇಂದ್ರಸ್ವಾಮಿಗಳು ಹೇಳಿದ್ದು. ದಿನಾಂಕ: ೧೬-೫-೨೦೦೧ರಂದು ನೆಲಮಂಗಲ ತಾಲ್ಲೂಕು ಸೋಂಪು ಹೋಬಳಿ ಹೊನ್ನೇನಹಳ್ಳಿಯಲ್ಲಿ ಬಸವಜಯಂತಿ ನಡೆದ ಸಂದರ್ಭ. ಬಿಜಾಪುರ ಜಿಲ್ಲೆ ಬಸವನಬಾಗೆವಾಡಿಯ ಡಾ॥ ಪುರಾಣಿಕರು, ಬಿ.ಎ.ಎಂ.ಎಸ್. ಪದವೀಧರರು. ಸುಸಂಸ್ಕೃತ ವೈದ್ಯರು ವಿಚಾರವಂತರು, ವಿಜ್ಞಾನಪ್ರಿಯರು, ಜನಾನುರಾಗಿಗಳು, ಹಸ್ತಶುದ್ಧಿಯುಳ್ಳವರು, ತಮ್ಮ ಬಳಿಗೆ ಬಂದ ರೋಗಿಗಳನ್ನು ದೇವರೆಂದೇ ಕಾಣುವ ಮೃದುನುಡಿಗಳ ಸದುವಿನಯ ಶೀಲರು. ಮೇಲಣಗವಿಮಠದ ಶ್ರೀಗಳಿಗೂ ಶ್ರೀ ಪುರಾಣಿಕರಿಗೂ ಆತ್ಮೀಯ ಬಾಂಧವ್ಯ. ಪುರಾಣಿಕರಲ್ಲಿ ಶ್ರೀಗಳವರು ಕಂಡ ಒಂದು ವೈಶಿಷ್ಟ್ಯವೆಂದರೆ ಮಗನಿಗೆ ತಂದೆ ಹೆದರುವ ಸ್ವಭಾವ. ಪುರಾಣಿಕರಿಗೆ ಒಬ್ಬ ಮಗ. ಅವರೂ ತಂದೆಯಂತೆಯೇ ಬಿ.ಎ.ಎಂ.ಎಸ್. ವೈದ್ಯಕೀಯ ಪದವಿ ಪಡೆದ ತರುಣ ವೈದ್ಯ. ತುಂಬ ಸಂಭಾವಿತ. ತಂದೆಯ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆಯುವ ಪಿತೃಭಕ್ತಿಯುಳ್ಳ ಸುತ್ತ್ಯರ್ಹಪುತ್ರರತ್ನ. ಮಗ ಏನೇ ಮಾಡಿದರೂ, ಏನೇ ಆಡಿದರೂ ಪುರಾಣಿಕರು ಆಕ್ಷೇಪಿಸುತ್ತಿರಲಿಲ್ಲ. ಗದರಿಸುತ್ತಿರಲಿಲ್ಲ, ಬಯ್ಯುತ್ತಿರಲಿಲ್ಲ, ಬುದ್ಧಿವಾದ ಹೇಳುತ್ತಿರಲಿಲ್ಲ. ಬದಲಾಗಿ ಹೆದರುತ್ತಿದ್ದರು. ಶ್ರೀಗಳವರಿಗೆ ಇದೊಂದು ಅಚ್ಚರಿಯಾಗಿ ಕಾಣುತ್ತಿದ್ದಿತು, ತಿಳಿಯಬೇಕೆಂಬ ಕುತೂಹಲ ಕೆದರಿಕೊಂಡಿತು ಒಂದು ದಿನ, ಪುರಾಣಿಕರನ್ನು ಸಂಕೋಚದಿಂದಲೇ ಪ್ರಶ್ನಿಸಿದರು. ''ಏನೂ ಪುರಾಣಿಕರೆ, ನಿಮ್ಮನ್ನೊಂದು ಮಾತು ಕೇಳುತ್ತೇನೆ. ಬೇಸರಮಾಡಿಕೊಳ್ಳಬೇಡಿ. ಉತ್ತರ ಕೊಡಬೇಕು'' ಎಂದರು. ''ಅಯ್ಯೋ ಬುದ್ಧಿ, ಯಾಕಿಷ್ಟೊಂದು ಸಂಕೋಚ. ಕೇಳಿ ಏನು ನಿಮ್ಮ ಕುತೂಹಲಕ್ಕೆ ಕಾರಣವಾದುದು'' ಎಂದರು ಪುರಾಣಿಕರು. ಶ್ರೀಗಳು ''ಅಲ್ಲ ಪುರಾಣಿಕರೆ, ಸ್ವಾಭಾವಿಕವಾಗಿ ಮಗ ತಂದೆಯಾದವನಿಗೆ ಹೆದರುವುದು ಸಹಜ ಹಾಗೂ ಧರ್ಮ. ಆದರೆ ನೀವು ನಿಮ್ಮ ಮಗನಿಗೆ ಹೆದರುತ್ತೀರಲ್ಲಾ ಯಾಕೆ?'' ಎಂದರು. ಪುರಾಣಿಕರು ಅದಕ್ಕೆ ಹೇಳಿದ್ದು ಹೀಗೆ – ನೋಡಿ, ಒಮ್ಮೆ ಬೆಂಗಳೂರಿಗೆ ಹೋಗಿ ಬರುವಾಗ ಮಾರ್ಗಮಧ್ಯದಲ್ಲಿ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಿದ್ದೆ. ಪೂಜ್ಯಶ್ರೀಗಳವರ ದರ್ಶನಮಾಡಬೇಕೆಂಬ ಹಂಬಲ ಬಹಳ ದಿನಗಳಿಂದ ನನ್ನಲ್ಲಿ ಗೂಡುಗಟ್ಟಿತ್ತು. ಆ ಹಂಬಲವನ್ನು ಪೂರೈಸಿಕೊಳ್ಳಬೇಕೆಂದು ಶ್ರೀಮಠಕ್ಕೆ ಹೋದೆ. ಕ್ಷೇತ್ರ ನನ್ನ ಕಣ್ಣಿಗೆ ಕಲ್ಯಾಣವನ್ನು ಕಂಡಂತಾಯಿತು. ಪೂಜ್ಯಪಾದರನ್ನು ಕಾಣುವುದಕ್ಕೆಂದು ಸಾವಿರಾರು ಭಕ್ತಾದಿಗಳು ಸಾಲುಗಟ್ಟಿನಿಂತಿದ್ದರು. ಅವರಲ್ಲಿ ನಾನು ಒಬ್ಬನಾದೆ. ತಮ್ಮ ಬಳಿಗೆ ಬಂದ ಒಬ್ಬೊಬ್ಬರನ್ನೂ ಸ್ವಾಮಿಗಳು ಪ್ರೀತಿಯಿಂದ, ಅಕ್ಕರೆಯಿಂದ ಮಾತಾಡಿಸುತ್ತಿದ್ದರು. ಶ್ರೀಗಳವರ ಮಾತುಗಳು ಅವು ಮಾತುಗಳೇ ಅಲ್ಲ; ಅಮೃತದ ನುಡಿಗಳು. ಪ್ರಶಾಂತ ಭಾವದ ಗಂಭೀರಮುಖ. ಲಿಂಗಪೂಜೆಯ ಪ್ರಸನ್ನ ತೇಜಸ್ಸು, ವಿಭೂತಿಯ ವಿಶಾಲ ಹಣೆ, ವೈರಾಗ್ಯಕ್ಕೆ ಎತ್ತಿಕಟ್ಟಿದ ಕಾವಿಯ ಮುಂಡಾಸು. ಕಾರ್ಯಾಲಯದ ತುಂಬ ಸದ್ಗ್ರಂಥರಾಶಿ. ಭಕ್ತಿಭಂಡಾರಿ ಬಸವಣ್ಣನವರ ಭಾವಚಿತ್ರ ಬೆನ್ನಹಿನ್ನೆಲೆಗೆ. ಅದೊಂದು ಭಕ್ತಿಲೋಕ. ಬಂದ ಭಕ್ತಾದಿಗಳೆಲ್ಲ ತಮ್ಮ ನೋವನ್ನು, ಅಪೇಕ್ಷೆಯನ್ನು ಸ್ವಾಮಿಗಳಲ್ಲಿ ತೋಡಿಕೊಳ್ಳುತ್ತಿದ್ದರು. ಎಲ್ಲರಿಗೂ ವಿಷಯವರಿತು ಸಾಂತ್ವನ, ನಿರ್ದೇಶನ ಶ್ರೀಗಳವರಿಂದ ದೊರೆತಿತ್ತು. ನಾನೂ ಶ್ರೀಗಳವರ ಸಮೀಪ ಹೋದೆ. ನನಗರಿವಿಲ್ಲದಂತೆಯೇ ಅವರ ಶ್ರೀ ಚರಣಗಳ ಮೇಲೆ ಹಣೆಯಿಟ್ಟು ನಮಸ್ಕರಿಸಿದೆ. ಬಹುದಿನದ ಹಂಬಲ ಕೈಗೂಡಿತ್ತು. ಧನ್ಯಭಾವದಿಂದ ಪುಳಕಗೊಂಡೆ. ಅದ್ಯಾವ ಪುಣ್ಯಗಳಿಗೆಯೋ ಕಾಣೆ. ಮನಸ್ಸು ಹೇಳಿತು – ''ಬುದ್ಧಿ, ನನಗೆ ಗಂಡುಮಗುವಾದರೆ ನಿಮ್ಮ ಹೆಸರಿಟ್ಟು ಪೂಜಿಸುತ್ತೇನೆ'' – ಎಂದಿತು. ಈ ಮೊದಲು ಹೇಳುವುದನ್ನು ಮರೆತಿದ್ದೆ. ನನ್ನ ಧರ್ಮಪತ್ನಿ ಆಗ ತುಂಬು ಗರ್ಭಿಣಿಯಾಗಿದ್ದ ದಿನಗಳು. ಪೂಜ್ಯರಿಗೆ ನಮಸ್ಕರಿಸಿ ಊರಿಗೆ ಹಿಂದಿರುಗಿದೆ. ಆಶ್ಚರ್ಯ ಎದುರಾಯಿತು. ನನ್ನಾಕೆ ಗಂಡುಮಗುವನ್ನು ಹೆತ್ತಿದ್ದಳು. ಪರಮಪೂಜ್ಯರು ಮೌನವಾಗಿಯೇ ಆಶೀರ್ವಸಿದ್ದರು. ಎಂಥ ಅನುಗ್ರಹ ! ಏನು ಕಾರುಣ್ಯ ! ಹೃದಯ ತುಂಬಿಬಂತು. ಇಲ್ಲಿಂದಲೇ ಸಾಷ್ಟಾಂಗ ನಮಸ್ಕಾರ ಸಮರ್ಪಿಸಿದೆ. ಅಂದು ಮಠದಲ್ಲಿ ಅಂದುಕೊಂಡಂತೆ ಹುಟ್ಟಿದ ಮಗುವಿಗೆ ''ಶಿವಕುಮಾರ''ನೆಂದು ಹೆಸರಿಟ್ಟೆವು. ಆ ಕಾರಣಕ್ಕಾಗಿ ಮಗ ಶಿವಕುಮಾರನನ್ನು ಬಯ್ಯುವುದಿರಲಿ, ನಿಂದಿಸುವುದೂ ನನ್ನಿಂದಾಗದು. ಅವನನ್ನು ಬಯ್ದರೆ, ನಿಂದಿಸಿದರೆ 'ಸಿದ್ಧಗಂಗೆಯ ಅಜ್ಜ'ನವರನ್ನೇ ಬಯ್ದಂತಾಗುತ್ತದೆ ಎಂಬ ಭಾವನೆ ನನಗೆ. ಅದಕ್ಕಾಗಿಯೇ ನನ್ನ ಮಗನನ್ನು ಬಯ್ಯಲಾರೆ ಬದಲಾಗಿ ಹೆದರುತ್ತೇನೆ. ಆ ಮಹಾಪೂಜ್ಯರ ಶುಭನಾಮವನ್ನು ಪಡೆದ ಮಗನಲ್ಲಿ ಅವರನ್ನು ಕಾಣುವ, ಅವರನ್ನು ಸ್ಮರಿಸುವ ಸಂತೋಷ ನನ್ನದಾಗಿದೆ ಎಂದರು ಪುರಾಣಿಕರು.

ಪರಮ ಪೂಜ್ಯ ಸಿದ್ಧಗಂಗಾ ಶ್ರೀಗಳವರ ಪವಿತ್ರ ಚಾರಿತ್ರ್ಯ ದೆಸೆದೆಸೆಗೆ ಹರಡಿದೆ ಎಂಬುದಕ್ಕೆ ಇಂದೊಂದು ಪುಟ್ಟ ನಿದರ್ಶನವೆಂದರು ಪೂಜ್ಯ ಶ್ರೀಮಲಯಶಾಂತಮುನಿದೇಶಿ ಕೇಂದ್ರಸ್ವಾಮಿಗಳು.

❋

## ವಚನ ವಿಶ್ಲೇಷಣೆ

*ಉದಕದೊಳಗೆ ಬೈಚಿಟ್ಟ ಕಿಚ್ಚಿನಂತೆ ಇದ್ದಿತ್ತು!*
*ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು!*
*ನನೆಯೊಳಗಳ ಪರಿಮಳದಂತೆ ಇದ್ದಿತ್ತು!*
*ಕೂಡಲಸಂಗಮ ದೇವರ ನಿಲವು ಕನ್ನೆಯ*
*ಸ್ನೇಹದಂತೆ ಇದ್ದಿತ್ತು!*

ಚಿತ್ಪರಮಲಿಂಗದ ಚಿದಂಶವಾದ ಆತ್ಮನು ಶಿವಾಜ್ಞೆಯಿಂದ ಜಡಪಿಂಡಸಂಬಂಧಿಯಾಗಿ ತನ್ನ ನಿಜವನ್ನು ಮರೆದಿರುವಲ್ಲಿ, ಆ ಆತ್ಮನ ನಿಜದ ನಿಲುವಾದ ಚಿತ್ಪರಮ ಲಿಂಗವು ಆ ಪಿಂಡರೂಪವಾದ ಆತ್ಮಾಂತರ್ಗತವಾಗಿ, ಜಡಪಿಂಡದಲ್ಲಿ ತದಾಕಾರವಾಗಿ ಗುಪ್ತದಲ್ಲಿರುವುದು. ಅದು ಹೇಗೆಂದರೆ, ದೃಷ್ಟಾಂತ :

೧. ಶಿವಾಜ್ಞೆಯಿಂದ ಸಮುದ್ರದಲ್ಲಿ ವಡಬಾಗ್ನಿಯಿದ್ದು, ಆ ಸಮುದ್ರವನ್ನು ಗ್ರಹಿಸುವ ದೀಪನದೋರದೆ, ಜಲದಲ್ಲಿ ತದಾಕಾರವಾಗಿರುವಂತೆ ಚಿದಗ್ನಿ-ಸ್ವರೂಪವಾದ ಪರಮ ಲಿಂಗವು ಪಿಂಡದಲ್ಲಿದ್ದು ಆ ಪಿಂಡವನ್ನು ದಹಿಸದೆ ತದಾಕಾರವಾಗಿರುವುದು.

೨. ಚಂದ್ರಮನೊಳಗಣ ಅಮೃತಕಿರಣವು ಆ ಅಮೃತದಿಂದ ಬೇರ್ಪಡಿಸಿ ತೋರದಂತೆ, ಪಿಂಡಮಧ್ಯದಲ್ಲಿರುವ ಅಮೃತರಸವನ್ನು ಬೇರ್ಪಡಿಸಿ ಚಿತ್ಪರಮಪ್ರಕಾಶ ಲಿಂಗವು ತೋರದು.

೩. ಕಸುನನೆಯೊಳಗೆ ಸುವಾಸನೆದೋರದೆ ಇದ್ದ ಸುಗಂಧದಂತೆ, ಆ ಚಿತ್ಪರಮ ಲಿಂಗವು ಪಿಂಡಮಧ್ಯದಲ್ಲಿದ್ದು ತನ್ನ ಶಿವಸದ್ವಾಸನಾಜ್ಞಾನ ತಲೆದೋರದೆ ಆ ಪಿಂಡದಲ್ಲಿ ತದಾಕಾರವಾಗಿ ಅಡಗಿರುವುದು.

೪. ವಿಷಯ ಸಂಗಸುಖದ ರತುವಾಗದೆಯಿದ್ದ ಹಸುಳೆಯಲ್ಲಿ ಕಾಮವು ಮೈಗಾಣಿಸದೆ ಅಡಗಿ ಇರುವಂತೆ, ಚಿತ್ಪರಮಲಿಂಗದ ಸುಖಾನಂದವು ಪಿಂಡಸ್ಥವಾಗಿದ್ದು ಮೈಗಾಣಿಸದೆ ಇರುವುದು.

(ಕಲ್ಲುಮಠದ ಪ್ರಭುದೇವರ ''ಲಿಂಗಲೀಲಾವಿಲಾಸ ಚಾರಿತ್ರ''ದಲ್ಲಿನ ವ್ಯಾಖ್ಯಾನ)

೧. ಉದಕದಲ್ಲಿ ಅಗ್ನಿಯು ಗೋಪ್ಯವಾಗಿರುವ ಹಾಗೆ, ಸಂಸಾರರಸಸ್ವರೂಪವಾದ ಪಿಂಡದ ಮಧ್ಯದಲ್ಲಿ ಚಿದಗ್ನಿಸ್ವರೂಪವಾದ ಪರಬ್ರಹ್ಮವಡಗಿದ್ದು ಕುರುಹುಗಾಣಿಸದೆ ರಹಸ್ಯವಾಗಿರುವುದು.

೨. ಚಂದ್ರಕಿರಣದೊಳಗಿರುವ ಅಮೃತವು ಆ ಕಿರಣದಿಂದ ಬೇರ್ಪಡಿಸಲು ಬಾರದ ಹಾಗೆ, ಪಿಂಡ (= ಜೀವಾತ್ಮ) ದಲ್ಲಿ ಮಾಧುರ್ಯಯಮಾನಸ್ವೀಕಾರ ಸ್ನೇಹರಸ ಸ್ವರೂಪವಾದ ಪರಬ್ರಹ್ಮವಡಗಿರುವುದು.

೩. ಸಕಲ ತತ್ವ ಸಂಕೋಚಿತವಾದ ಪಿಂಡದ ಮಧ್ಯದಲ್ಲಿ ಸ್ವಾನುಭಾವ ಸದ್ವಾಸನಾ ಸ್ವರೂಪವಾದ ಪರಬ್ರಹ್ಮವಡಗಿರುವುದು.

೪. ಎಲೆ ಪರಶಿವಲಿಂಗವೇ, ನವವರುಷದ ಕನ್ನಿಕೆಯಲ್ಲಿ ಕಾಮಾಭಿಮಾನವು ಗೋಪ್ಯವಾಗಿರುವ ಹಾಗೆ, ನವವಿಧಭಕ್ತಿಯ ಗೋಪ್ಯವನ್ನುಳ್ಳ ಪಿಂಡದ ಮಧ್ಯದಲ್ಲಿ ಪೂರ್ಣಜ್ಞಾನಾಭಿಮಾನ ಸ್ವರೂಪವಾದ ಪರಬ್ರಹ್ಮಡಗಿದ್ದು ಕುರುಹುಗಾಣಿಸದೆ ರಹಸ್ಯವಾಗಿರುವುದು.

(ಬಸವನ ಬೆಡಗಿನ ವಚನಗಳಿಗೆ ಸೋಮಶೇಖರ ಶಿವಯೋಗಿ ವ್ಯಾಖ್ಯಾನ.)

*(ಕೃಪೆ : ಬಸವ ವಚನಾಮೃತ)*

"ಸ್ವಾತಂತ್ರ್ಯ ಬಂದ ನಂತರ ಉಂಟಾಗಿರತಕ್ಕ ತಪ್ಪು ಕಲ್ಪನೆ ನಮ್ಮ ದೇಶಕ್ಕೆ ದೊಡ್ಡ ಕಂಟಕವಾಗಿದೆ. ಯಾವುದು ತಪ್ಪು ಕಲ್ಪನೆ ಎಂದರೆ ಆರಾಮ ಜೀವನ, ಸುಖ ಜೀವನ, ಸ್ವಾತಂತ್ರ್ಯ ನಮ್ಮೆಲ್ಲದ್ದಕ್ಕೂ ಕೂಡ ಸುಖ ತಂದುಕೊಡಬೇಕು ಎನ್ನುವ ತಪ್ಪು ಕಲ್ಪನೆ. ಮನುಷ್ಯ ಕ್ರಿಯಾಶೀಲನಾಗಬೇಕು. ದುಡಿಯಬೇಕು. ಪ್ರಾಮಾಣಿಕ ಜೀವನ ಸಾಗಿಸಬೇಕು ಎನತಕ್ಕಂಥ ಮಹಾತತ್ತ್ವ ಕುರಿತವಾಗತಕ್ಕಂಥ ವಿಷಯ ನಾವು ಕಾಣುತ್ತಿದ್ದೇವೆ."

- ಶ್ರೀವಾಣಿ





## ಶಿಕ್ಷಣ – ಒಂದು ಅವಲೋಕನ

– ಎಚ್.ಎಸ್. ಸಿದ್ಧಗಂಗಪ್ಪ

''ಭಾರತದ ಭವಿಷ್ಯವು ನಮ್ಮ ಶಾಲಾ-ಕಾಲೇಜುಗಳ ವರ್ಗಕೋಣೆಯಲ್ಲಿ ರೂಪಿತವಾಗುತ್ತಿದೆ'' ಎಂಬ ಸ್ಫೂರ್ತಿದಾಯಕ ವಾಕ್ಯದಿಂದ ಕೊಠಾರಿ ಕಮಿಷನ್ ವರದಿ ಪ್ರಾರಂಭವಾಗುತ್ತದೆ. ಅವರು ಮೇಲಿನ ಅಭಿಪ್ರಾಯವನ್ನು ಅಭಿವ್ಯಕ್ತಪಡಿಸಿದ್ದು ೧೯೬೬ರಲ್ಲಿ. ಕಳೆದ ೩೫ ವರ್ಷಗಳಿಂದ ನಡೆದು ಬಂದ ಶಿಕ್ಷಣ ಪದ್ಧತಿ ಎಂತಹ ಭೀಕರ ವಾತಾವರಣವನ್ನು ಸೃಷ್ಟಿಮಾಡಿದೆ ಎಂದು ಅರ್ಥಮಾಡಿಕೊಳ್ಳಲು ಯಾವುದೇ ರೀತಿಯ ಸಂಶೋಧನೆ ಬೇಕಾಗಿಲ್ಲ. ಶಿಕ್ಷಣವೆಂದರೆ ದೇಶಕ್ಕೆ ಮಾನವ ಸಂಪನ್ಮೂಲಗಳನ್ನು ಒದಗಿಸುವ ಕೇಂದ್ರ, ಸ್ಥಳ, ಸಾಧನ. ಆದರೆ ಇಂದು ನಮ್ಮ ಶಿಕ್ಷಣ ಸಂಸ್ಥೆಗಳಿಂದ ಎಂತಹ ಮಾನವ ಸಂಪತ್ತು ಹೊರಬೀಳುತ್ತಿದೆ? ಆತ್ಮಾವಲೋಕನ ಮಾಡಿಕೊಳ್ಳಬೇಕಾದ ಪರಿಸ್ಥಿತಿ ಹಿಂದಿಗಿಂತಲೂ ಇಂದು ತುಂಬಾ ಅಗತ್ಯವಾಗಿದೆ.

ಇಂದಿನ ಶಿಕ್ಷಣ ಪದ್ಧತಿ ಕೇವಲ ನೌಕರಿಗಳಿಸುವುದೊಂದೇ ಪ್ರಮುಖ ಗುರಿಯಾಗಿದೆ. ಅದಕ್ಕೆ ಅಗತ್ಯವಾದ ಆಧಾರ ಪರೀಕ್ಷೆಯಲ್ಲಿ ಪಡೆದ ಅಂಕಗಳು. ಇದರಿಂದ ಶಿಕ್ಷಣ ಕ್ರಮ ಹಾಗೂ ವ್ಯವಸ್ಥೆಗಳು ಪರೀಕ್ಷಾ ನಿಯಂತ್ರಣದಲ್ಲಿವೆ ಪೋಷಕರಿಗೂ ಮಕ್ಕಳ ಪರೀಕ್ಷಾ ಅಂಕಗಳ ಸಾಧನೆಯೇ ಮುಖ್ಯಗುರಿಯಾಗಿದೆ. ಇಂದಿನ ಶಿಕ್ಷಣ ಪದ್ಧತಿ ಮೂರು 'E' ಮೇಲೆ ನಿಂತಿದೆ.

1. E – Education (ಶಿಕ್ಷಣ)
2. E – Examination (ಪರೀಕ್ಷೆ)
3. E – Employment (ಉದ್ಯೋಗ)

ಈ ಹಿನ್ನೆಲೆಯಲ್ಲಿ ಶಿಕ್ಷಣ ವ್ಯವಸ್ಥೆ ರೂಪಿತವಾಗಿದೆ.

ಪ್ರಸ್ತುತ ಶಿಕ್ಷಣ ಪದ್ಧತಿ ಅನೇಕ ದೋಷಗಳ, ವಿಸಂಗತಿಗಳ ಆಗರವಾಗಿದೆ. ಬಯಸುವುದು ಒಂದಾದರೆ; ಅದರ ಫಲ ಬೇರೆಯದಾಗಿದೆ. "You can't grow figs out of thorn's ಎಂಬುವಾಗಿದೆ. 'ಬಿತ್ತುವುದೊಂದು ಬಯಸುವ ಬೆಳೆ ಬೇರೊಂದು'. ಈ ವಿರೋಧಾಭಾಸಗಳನ್ನು ಪೋಷಕರು, ಶಿಕ್ಷಣ ತಜ್ಞರು, ಆಡಳಿತ ನಡೆಸುವವರು ಅರ್ಥಮಾಡಿಕೊಂಡು ಮುನ್ನಡೆಯಬೇಕಾಗಿದೆ.

'ಮಗುವಿನ ಸಂಪೂರ್ಣ ವ್ಯಕ್ತಿತ್ವ ವಿಕಾಸವೇ ಶಿಕ್ಷಣದ ಗುರಿ' ಎಂಬುದನ್ನು ಅರ್ಥಪೂರ್ಣವಾಗಿ ಶಿಕ್ಷಣದಲ್ಲಿ ಅಳವಡಿಸಿಕೊಳ್ಳುವ ಅಗತ್ಯ ಹಿಂದಿಗಿಂತಲೂ ಇಂದು ಹೆಚ್ಚಾಗಿದೆ. ಪಾಶ್ಚಾತ್ಯ ಶಿಕ್ಷಣತತ್ತ್ವ ತಜ್ಞನೊಬ್ಬ ಶಿಕ್ಷಣದ ಉದ್ದೇಶವನ್ನು ತುಂಬಾ ಸರಳವಾಗಿ "A sound mind in a sound body" ಎಂದು ವ್ಯಾಖ್ಯಾನಿಸಿದ್ದಾನೆ. ಸ್ವಾಮಿ ವಿವೇಕಾನಂದರು 'ಹುಟ್ಟಿನಿಂದಲೇ ಶಿಕ್ಷಣ' ಎಂದು ಹೇಳಿದರೆ; ಮಹಾತ್ಮ ಗಾಂಧೀಜಿಯವರು ಮಗುವಿನಲ್ಲಿ, ಮಾನವರಲ್ಲಿ 'ಹುದುಗಿದ ಶ್ರೇಷ್ಠವಾದುದನ್ನು ಶರೀರ, ಮನಸ್ಸು, ಆತ್ಮ, ಈ ಎಲ್ಲದರಲ್ಲೂ ವಿಕಾಸಗೊಳಿಸುವುದೇ ಶಿಕ್ಷಣ' ಎಂದು ವ್ಯಾಖ್ಯಾನಿಸಿದ್ದಾರೆ.

ಶಿಕ್ಷಣದ ಮೂಲ ಉದ್ದೇಶ 'ಸ್ವಸ್ಥ ಸಮಾಜದ ನಿರ್ಮಾಣ'. ಇಲ್ಲಿ ಸ್ವಸ್ಥ ಎಂದರೆ ಶಾರೀರಿಕ, ಬೌದ್ಧಿಕ, ಭಾವನಾತ್ಮಕ ಹಾಗೂ ಆಧ್ಯಾತ್ಮಿಕತೆಗಳಿಗೆ ಪೂರಕವಾಗಿರುವಂತಹುದು. ಈಗಾಗಲೇ ಪ್ರಸ್ತಾಪಿಸಿರುವಂತೆ 'ಶಿಕ್ಷಣ'ದ ಉದ್ದೇಶ ಕೇವಲ ಪದವಿ ಸರ್ಟಿಫಿಕೇಟ್‌ಗಳನ್ನು; ಉದ್ಯೋಗವನ್ನು ಪಡೆಯುವುಕ್ಕಷ್ಟೇ ಸೀಮಿತವಾಗಿರಬಾರದು. ಸ್ವಾತಂತ್ರ್ಯ ನಂತರ ಶಿಕ್ಷಣದ ರೀತಿ ನೀತಿಗಳು ಈ ಉದ್ದೇಶಗಳಿಗೆ ಅನುಗುಣವಾಗಿ ಮುಂದುವರಿಯುತ್ತಿರುವುದು ವಿಷಾದದ ಸಂಗತಿ.

ಮಗುವಿನ ಶಾರೀರಿಕ, ಭಾವನಾತ್ಮಕ, ಕೌಶಲಗಳ ವಿಕಾಸಕ್ಕೆ ಪೂರಕವಾದ, ಸ್ವಾವಲಂಬನೆಗೆ ಬೇಕಾದ ವಾತಾವರಣ, ಸತ್ಯ, ಧರ್ಮ, ನೀತಿ, ಪ್ರಾಮಾಣಿಕತೆ, ವಿನಯ, ಸರ್ವಧರ್ಮ ಸಹಿಷ್ಣತೆ, ಐಕ್ಯತಾ ಭಾವನೆ, ತ್ಯಾಗ, ಸಂಕಟದಲ್ಲಿರುವವರಿಗೆ ಅನುಕಂಪ ಇವುಗಳಿಗೆ ಪೋಷಕವಾಗಿರುವಂತೆ ಶಿಕ್ಷಣ ಪದ್ಧತಿಯನ್ನು ರೂಪಿಸಬೇಕು.

ಇಂದು ಎಲ್ಲೆಂದರಲ್ಲಿ ನಾಯಿಕೊಡಗಳಂತೆ ದಿಢೀರನೆ ಹಣ ಸಂಪಾದನೆ ಹಾಗೂ ಯಾವುದೇ ನಿಯಮಗಳನ್ನು ಅನುಸರಿಸದೆ ಬೆಳೆಯುತ್ತಿರುವ ಶಿಕ್ಷಣ ಸಂಸ್ಥೆಗಳು ಪೋಷಕರ ಜೇಬಿಗೆ ಕತ್ತರಿ ಹಾಕುವ ದೃಷ್ಟಿ ಇಟ್ಟುಕೊಂಡು, ಅವರನ್ನು ವಂಚಿಸುವುದಕ್ಕೆ ಏನೇನುಬೇಕೋ ಅವೆಲ್ಲವನ್ನು ಮಾಡುತ್ತಿವೆ. ಸರ್ಕಾರ ಇಂತಹ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸುವುದಕ್ಕೆ ಅನುಮತಿ ನೀಡುವ ಮೊದಲು ಕೂಲಂಕುಷವಾಗಿ ಪರಿಶೀಲಿಸಿ ಯಾವುದೇ ರೀತಿಯ ಒತ್ತಡಗಳಿಗೆ ಮಣಿಯದೆ ನಿರ್ಧಾರ ತೆಗೆದುಕೊಳ್ಳುವುದು ಮಕ್ಕಳ ಹಾಗೂ ಪೋಷಕರ ಹಿತದೃಷ್ಟಿಯಿಂದ ಒಳ್ಳೆಯದು. ಶಾಲೆಗಳಲ್ಲಿ ಕನಿಷ್ಠ ಮೂಲಭೂತ ಸೌಲಭ್ಯಗಳು ಇರುವಂತೆ ನೋಡಿಕೊಳ್ಳಬೇಕು. ಅದಕ್ಕಾಗಿ ಸರ್ಕಾರದ ಮಟ್ಟದಲ್ಲಿ ಅನುಭವಿ ಶಿಕ್ಷಣ ತಜ್ಞರ ಸಮಿತಿಯನ್ನು ರಚಿಸಿ ಅವರಿಗೆ ಕ್ರಮಕೈಗೊಳ್ಳುವ ಅಧಿಕಾರವನ್ನು ನೀಡಬೇಕು.

ಇಂದಿನ ಶಿಕ್ಷಣ ಪದ್ಧತಿಯಲ್ಲಿರುವ ಸಾಮಾನ್ಯ ದೋಷಗಳನ್ನಾದರೂ ಪಟ್ಟಿಮಾಡಿ; ಅವುಗಳ ನಿವಾರಣೆಗೆ ಸೂಕ್ತ ಕ್ರಮಕೈಗೊಳ್ಳಬೇಕು. ಪ್ರಾಮಾಣಿಕ, ದಕ್ಷ ಅನುಭವಿ ಶಿಕ್ಷಣ ತಜ್ಞರೊಳಗೊಂಡ ಸಮಿತಿಯನ್ನು ರಚಿಸಿ, ಅವರು ನೀಡುವ ವರದಿಯನ್ನು ಪರಿಶೀಲಿಸಿ ಅನುಷ್ಠಾನಗೊಳಿಸಬೇಕು. ಶಿಕ್ಷಣ ಕೇವಲ ಸರ್ಟಿಫಿಕೇಟ್‌ಗಳನ್ನು ನೀಡುವುದರ ಜೊತೆಗೆ ನಿರುದ್ಯೋಗಿಗಳನ್ನು ಸೃಷ್ಟಿಸುವ ಕಾರ್ಖಾನೆಗಳಾಗಬಾರದು. ವಿದ್ಯಾರ್ಥಿಗಳ ಮಾನಸಿಕ ಹಾಗೂ ಭೌದ್ಧಿಕ ವಿಕಾಸಕ್ಕೆ ಪೂರಕವಾಗುವಂತೆ ಶಿಕ್ಷಣವನ್ನು ನೀಡುವಂತಾಗಬೇಕು. ಪಠ್ಯೇತರ ಚಟುವಟಿಕೆಗಳಿಗೂ ಹೆಚ್ಚು ಒತ್ತು ನೀಡಬೇಕು.

''ಇಂದಿನ ಮಕ್ಕಳು ಮುಂದಿನ ಭವ್ಯಭಾರತವನ್ನು ರೂಪಿಸುವ ಶಿಲ್ಪಿಗಳು' ಎಂಬ ಹಿರಿಯರ, ಶಿಕ್ಷಣ ತಜ್ಞರ ಮಾತು ಅರ್ಥಪೂರ್ಣವಾಗಬೇಕಾದರೆ, ಮಾನವೀಯ ಮೌಲ್ಯಗಳ ನೈತಿಕ ನೆಲಗಟ್ಟಿನ ಹಿನ್ನೆಲೆಯಲ್ಲಿ ಶಿಕ್ಷಣ ಪದ್ಧತಿಯನ್ನು ರೂಪಿಸಬೇಕು. ಸಚ್ಚಾರಿತ್ರ್ಯ, ಪ್ರಾಮಾಣಿಕತೆ, ಮಾನವೀಯತೆ, ಅನುಕಂಪ, ದೇಶಾಭಿಮಾನ ಮಾಡುವಂತಹ ಶಿಕ್ಷಣವನ್ನು ನೀಡಬೇಕು. ಇದು ಪ್ರಾಥಮಿಕ ಹಂತದಿಂದಲೇ ಪ್ರಾರಂಭವಾಗಬೇಕು. ಏಕೆಂದರೆ ಸರಿಯಾದ ಗಟ್ಟಿಮುಟ್ಟಾದ ತಳಪಾಯ ಇಲ್ಲದೆ ಹೋದರೆ ಕಟ್ಟುವ ಕಟ್ಟಡ ಬಹಳ ಕಾಲ ಬಾಳಿಕೆ ಬರುವುದಿಲ್ಲ. ಅದು ದೀರ್ಘಕಾಲ ಬಾಳಿಕೆ ಬರಬೇಕಾದರೆ ಅದಕ್ಕೆ ಉತ್ತಮ ಗುಣಮಟ್ಟದ ವಸ್ತುಗಳನ್ನು ಅಗತ್ಯ ಪ್ರಮಾಣದಲ್ಲಿ ಬಳಸಬೇಕು. ಅಂತೆಯೇ ಮಕ್ಕಳು ಮುಂದೆ ಉತ್ತಮ ಪ್ರಜೆಗಳಾಗಿ ರೂಪುಗೊಳ್ಳಲು ಉತ್ತಮ ಮೌಲ್ಯಗಳನ್ನೊಳಗೊಂಡ ಶಿಕ್ಷಣವನ್ನು ನೀಡಬೇಕು. ಇಂತಹ ಶಿಕ್ಷಣವನ್ನು ಪಡೆದವರಿಂದ ಸರ್ವಾಂಗೀಣ ಸುಂದರ ಭಾರತ ನಿರ್ಮಾಣದ ಹೊಂಗನಸನ್ನು ಕಾಣಲು ಸಾಧ್ಯ.

**ಮಾತೃಭಾಷೆಯಲ್ಲಿ ಶಿಕ್ಷಣ**

ಪ್ರಾಥಮಿಕ ಶಿಕ್ಷಣವನ್ನು ಅವರವರ ಮಾತೃಭಾಷೆಯಲ್ಲಿಯೇ ನೀಡುವುದರಿಂದ ಮಕ್ಕಳಲ್ಲಿ ಗ್ರಹಿಸುವ ಶಕ್ತಿ ಹಾಗೂ ಗ್ರಹಿಸಿದ್ದನ್ನು ಮುಕ್ತವಾಗಿ ಅಭಿವ್ಯಕ್ತಗೊಳಿಸಲು ಸಾಧ್ಯವಾಗುತ್ತದೆ. ಮಾತೃಭಾಷಾ ಶಿಕ್ಷಣದ ಮಹತ್ವವನ್ನು ಮಹಾತ್ಮ ಗಾಂಧೀಜಿಯವರು, ಶಿಕ್ಷಣ ತಜ್ಞ, ಮಾಜಿ ರಾಷ್ಟ್ರಪತಿ ಡಾ. ಎಸ್. ರಾಧಾಕೃಷ್ಣನ್, ವಿಶ್ವಕವಿ ರವೀಂದ್ರನಾಥ ಠಾಕೂರ್, ರಾಷ್ಟ್ರಕವಿ ಕುವೆಂಪು, ಡಾ. ಸಿದ್ಧಯ್ಯ ಪುರಾಣಿಕ, ಡಾ. ಆರ್.ಸಿ. ಹಿರೇಮಠ, ಡಾ. ದೇ. ಜವರೇಗೌಡ, ಡಾ. ಎಚ್. ನರಸಿಂಹಯ್ಯ ಮೊದಲಾದವರು ಒತ್ತಿ ಹೇಳಿದ್ದಾರೆ. ಸರ್ಕಾರ ಈ ಬಗ್ಗೆ ಗಂಭೀರ ಚಿಂತನೆ ನಡೆಸಿ ಕಡ್ಡಾಯವಾಗಿ ಅನುಷ್ಠಾನಗೊಳಿಸಬೇಕು. ಸರ್ಕಾರದ ಜೊತೆಗೆ ಪೋಷಕರು, ಸಾರ್ವಜನಿಕರು, ಬುದ್ಧಿಜೀವಿಗಳು ಗಮನಹರಿಸಬೇಕು; ಸಹಕರಿಸಬೇಕು.

❖





ನಿಮಗಿದು ತಿಳಿದಿರಲಿ

# ಪುಳ್ಳಂಪುರಿಚಿ



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

ಪುಳ್ಳಂಪುರಿಚಿಯು ಹುಳಿರಸದಿಂದ ಕೂಡಿರುವುದಾಗಿದೆ. ಈ ಸೊಪ್ಪು ಜಠರಾಗ್ನಿಯನ್ನು ವೃಂದ್ಧಿಯನ್ನು ವೃದ್ಧಿಗೊಳಿಸುವುದಲ್ಲದೆ ಸಂಗ್ರಹಣಿ ಮತ್ತು ಅತಿಸಾರವನ್ನು ನಾಶಮಾಡುತ್ತದೆ. ಅಗ್ನಿಮಾಂದ್ಯ, ಗುಲ್ಮ, ಮೂಲವ್ಯಾಧಿಗಳನ್ನು ದೂರಗೊಳಿಸುತ್ತದೆ. ಮೂತ್ರವನ್ನು ಸಡಲಿಸುವುದಲ್ಲದೆ ಹೊಟ್ಟೆಯೊಳಗಿನ ಸಮಸ್ತ ವಿಕಾರಗಳನ್ನೂ ಶಾಂತಗೊಳಸುತ್ತದೆ. ಸಂಗ್ರಹಣಿ ರೋಗದಿಂದ ನರಳುತ್ತಿರುವವರು ಈ ಸೊಪ್ಪಿನ ೨ ತೊಲ ರಸಕ್ಕೆ ಸೈಂಧವಲವಣ, ಹುರಿದ ಜೀರಿಗೆಗಳ ೪-೪ ಗುಂಜಿಗಳಷ್ಟು ಪುಡಿಯನ್ನು ಸೇರಿಸಿ ಪ್ರಾತಃಕಾಲ ಸಾಯಂಕಾಲಗಳಲ್ಲಿ ಕುಡಿಯುವುದುತ್ತಮ.

★ ಅತಿಸಾರ ಮತ್ತು ಸಂಗ್ರಹಣಿ ಇವೆರಡೂ ಕರುಳುಗಳಿಗೆ ಸಂಬಂಧಿಸಿರುವ ರೋಗಗಳೇನೋ ನಿಜ. ಆದರೆ ಅತಿಸಾರದಲ್ಲಿ ಶರೀರದ ಸಂಪೂರ್ಣ ಜಲೀಯ ಧಾತುಗಳು (ನೀರಿನ ಅಂಶವು ಹೆಚ್ಚಾಗಿರತಕ್ಕ ರಸ ಮುಂತಾದುವುಗಳು) ದೂಷಿತಗಳಾಗುವುದರಿಂದ ಆಹಾರ ಪರಿಪಾಕಯಂತ್ರದ ಕಾರ್ಯವು ಮಾತ್ರ ವ್ಯತ್ಯಾಸಗೊಂಡು ನೀರಿನಂತಹ ಭೇದಿಗಳಾಗುವುವು. ಮತ್ತು ಹೊಟ್ಟೆಯನೋವು, ಹೊಟ್ಟೆಯ ನುಲಿತ, ಮೈಭಾರ, ಆಲಸ್ಯ ಮುಂತಾದ ತೊಂದರೆಗಳು ಹೆಚ್ಚಾಗಿಬರುತ್ತವೆ.

★ ಸಂಗ್ರಹಣಿಯಲ್ಲಿ-ಆಹಾರವನ್ನು ಪರಿಪಾಕ ಮಾಡತಕ್ಕ ಅಗ್ನಿಗೆ ಆಶ್ರಯವಾಗಿರುವ "ಗ್ರಹಣಿ'' ಎಂಬ ಕರುಳು ದೂಷಿತವಾಗಿ ಅದ ಶಕ್ತಿಯು ಕಡಿಮೆಯಾಗುತ್ತದೆ. ಈ ಕಾರಣದಿಂದ ಪರಿಪಾಕ ಯಂತ್ರವೇ ಕೆಟ್ಟು ಪದೇಪದೇ ಭೇದಿಗಳಾಗುತ್ತವೆ. ಹೊಟ್ಟೆಯಲ್ಲಿ ಮತ್ತು ಕರುಳಿನಲ್ಲಿ ಸ್ವಲ್ಪ ನೋವು ಯಾವಾಗಲೂ ಇರುತ್ತದೆ. ಈ ರೋಗವು ಬಂದಾಗ ಒಂದೊಂದುಸಲ ಬಹಳ ಹಸಿವಾಗುತ್ತದೆ ಮತ್ತು ಅನೇಕ ವಿಧ ರಸಗಳನ್ನು ಸೇವಿಸಬೇಕೆಂಬ ಆಶೆಯು ಹೆಚ್ಚಾಗುತ್ತದೆ. ಮೊದಲು ಅತಿಸಾರವು ಬಂದು ಗುಣವಾದ ಕೂಡಲೇ ನಾಲಗೆಯ ಚಟವನ್ನು ತಡೆಯಲಾರದೆ ಅಪಥ್ಯಾಹಾರವನ್ನು ಸೇವಿಸತಕ್ಕವರಿಗೇ ಈ ರೋಗವು ಹೆಚ್ಚಾಗಿ ಬರುವುದುಂಟು. ಆಹಾರವನ್ನು ಗ್ರಹಣಮಾಡಿ ಅದನ್ನು ಅರಗಿಸಿದನಂತರ ಪಕ್ವವಾದ ಭಾಗವನ್ನು ಹೊರಕ್ಕೆ ತಳ್ಳುವುದೇ ಗ್ರಹಣಿಯ ಕೆಲಸವಾಗಿರುತ್ತದೆ. ಆದಕಾರಣ ಇದರಿಂದ ಬರುವ ರೋಗಕ್ಕೂ ಗ್ರಹಣಿ ಅಥವಾ ಸಂಗ್ರಹಣ ಎಂಬ ಹೆಸರು ಬಂದಿದೆ. ಗ್ರಹಣಿ ಸಂಗ್ರಹಣಿಗಳಲ್ಲಿ ವಿಶೇಷ ಭೇದವೇನೂ ಇಲ್ಲ. ಗ್ರಹಣಿಯು, ಅಪಕ್ವವಾಗಿರುವ ಆಹಾರದೊಡನೆ ಸೇರಿ ಕೊಂಡಿರುವ ವಾಯು (ಆಮವಾಯು)ವನ್ನು ಯಾವಾಗ ಸಂಗ್ರಹ ಮಾಡುವುದೋ ಆಗ ಅದಕ್ಕೆ ಸಂಗ್ರಹಣಿಯೆಂಬ ಹೆಸರು ಬರುತ್ತದೆ. ಸಂಗ್ರಹಣಿಯು ಅತಿ ಭಯಂಕರ ವ್ಯಾಧಿಯಾಗಿರುತ್ತದೆ. ಕ್ರಮ ಕ್ರಮವಾಗಿ ಹೆಚ್ಚುತ್ತ ಕಡೆಗೆ ಅಸಾಧ್ಯವಾಗಿ ಬಿಡುತ್ತದೆ. ಈ ರೋಗವು ಬರುವು ಬರುವುದಕ್ಕೆ ಸ್ವಲ್ಪ ಮೊದಲು ಬಾಯಾರಿಕೆ, ಆಲಸ್ಯ, ಶಕ್ತಿ ಕುಂದುವುದು, ಅನ್ನವು ಅರಗುವ ಸಮಯದಲ್ಲಿ ಹೊಟ್ಟೆಯಲ್ಲಿ ಉರಿಯುವುದು, ಅನ್ನವು ಬಹಳ ತಡವಾಗಿ ಅರಗುವುದು ಮತ್ತು ಶರೀರವು ಭಾರವಾಗುವುದು ಇವೇ ಮುಂತಾದ ಲಕ್ಷಣಗಳು ತಲೆದೋರುವುವು. ಇದು ಈ ರೋಗದ "ಪೂರ್ವರೂಪ"ವಾಗಿದೆ. ಸಂಗ್ರಹಣಿಯ ಸಾಮಾನ್ಯ ಸ್ವರೂಪವನ್ನೇ ಇಲ್ಲಿ ತೋರಿಸಿರುವುದಾಗಿದೆ.

★ ಪುಳ್ಳಂಪುರಿಚಿಯ ರಸಕ್ಕೆ ಬಿಳಿ ಈರುಳ್ಳಿಯ ರಸವನ್ನು ಸೇರಿಸಿ ಕಣ್ಣುಗಳಿಗೆ ಹಾಕುವುದರಿಂದ ದುರ್ಮಾಂಸವು ಕರಗುತ್ತದೆ.

★ ಪುಳ್ಳಂಪುರಿಚೆಯ ರಸ ೨ತೊಲ, ಹುರಿದ ಹಿಂಗು, ೧ ಗುಜಿಯ ತೂಕ, ಹಿಪ್ಪಲಿ೨ ಗುಂಜಿಗಳ ತೂಕ, ಸೈಂಧವಲವಣ ೨ ಗುಂಜಿಗಳ ತೂಕ, ಹುರಿದ ಜೀರಿಗೆ ೨ ಗುಂಜಿಗಳ ತೂಕ, ಮೆಣಸು ೧ ಗುಂಜಿಯ ತೂಕ, ಇವುಗಳನ್ನೆಲ್ಲಾ ಒಟ್ಟುಗೂಡಿಸಿ ಪ್ರತಿದಿನ ಪ್ರಾತಃಕಾಲ, ಸಾಯಂಕಾಲಗಳಲ್ಲಿ ಕುಡಿಯುವುದರಿಂದ ಹಳೆಯ ಸಂಗ್ರಹಣೆ, ಅತಿಸಾರ. ಹೊಟ್ಟೆಯೊಳಗಿನ ಗಡ್ಡೆ ಇವುಗಳು ಖಂಡಿತವಾಗಿ ನಾಶವಾಗುತ್ತವೆ. ಈ ಔಷಧಿಯನ್ನು ಸೇವಿಸುವಾಗ ಹಸುವಿನ ಮಜ್ಜಿಗೆಗೆ ಹಿಪ್ಪಲಿ, ಜೀರಿಗೆ, ಶುಂಠಿ, ಸೈಂಧವಲವಣಗಳನ್ನು ಅರೆದು ಹಾಕಿ ಈ ಮಜ್ಜಿಯೊಡನೆ ಹಳೆಯ ಅಕ್ಕಿಯ ಅನ್ನವನ್ನು ಊಟಮಾಡಬೇಕು. ಇತರಂತೆ ೨೧ ದಿನಗವರೆಗೆ ಮಾಡ ಬೇಕು. ಈ ಮಜ್ಜಿಗೆಯನ್ನೇ ಯಥೇಷ್ಟವಾಗಿ ಕುಡಿಯಬಹುದು. ರೋಗ ನಿವಾರಣೆಗೆ ಈ ಪಥ್ಯವು ಅತ್ಯಾವಶ್ಯಕವಾಗಿದೆ. ಇದರಿಂದ ಅಗ್ನಿಯು ವೃದ್ಧಿಯಾಗಿ ಜೀರ್ಣಶಕ್ತಿಯು ಹೆಚ್ಚುತ್ತದೆ. ಅನಂತರ ಉದರ ರೊಗಗಳೆಲ್ಲವೂ ತಮ್ಮಷ್ಟಕ್ಕೆ ತಾವೇ ತಣ್ಣಗಾಗುತ್ತವೆ. ಅಗ್ನಿಬಲವೊಂದು ಸರಿಯಾಗಿದ್ದರೆ ಯಾವ ಉದರ ರೋಗವೂ ಬರುವುದಿಲ್ಲ.

★ ಹಿಪ್ಪಲಿ, ಮೋಡಿ, ಚಿತ್ರಮೂಲದ ಬೇರು, ಚವ್ಯ, ನೆಗ್ಗಲಿ ಮುಳ್ಳು, ಶುಂಠಿ, ಕೊತ್ತುಂಬರಿಬೀಜ, ಅಗಳಶುಂಠಿ, ಬಿಲ್ವದ ತಿರುಳು, ಅಜವಾನ ಪ್ರತಿಯೊಂದು ೪-೪ ತೊಲದಂತೆ ತಂದು ಕುಟ್ಟಿ ನೀರಿನೊಡನೆ ಅರೆದು ಚಟ್ನಿಯನ್ನು ಮಾಡಿಕೊಳ್ಳಬೇಕು. ಅನಂತರ ೬೪ತೊಲ ಹಸುವಿನ ತುಪ್ಪ, ಪುಳ್ಳಂಪುರಿಚೆ ಸೊಪ್ಪಿನ ರಸ ೨೫೬ ತೊಲ, ಗಟ್ಟಿ ಮಜ್ಜಿಗೆ ೨೫೬ ತೊಲ ಇವುಗಳನ್ನು ಒಂದು ಕಲಾಯಿಯ ಪಾತ್ರೆಯಲಿ ಹಾಕಬೇಕು. ಆ ಪಾತ್ರೆಯಲ್ಲಿ ಮೇಲಿನ ಚಟ್ಣಿಯನ್ನೂ ಹಾಕಿ ಮಂದಾಗ್ನಿಯಿಂದ ಕಾಯಿಸ ಬೇಕು. ರಸ ಮತ್ತು ಮಜ್ಜಿಗೆಯು ಇಂಗಿ ತುಪ್ಪವು ಮಾತ್ರ ಉಳಿದ ಮೇಲೆ ಇಳಿಸಿ ಶೋಧಿಸಿಕೊಳ್ಳಬೇಕು. ಈ "ಬೃಹತ್ ಚಾಂಗೇರೀಘೃತವು' ಕಫ ಮತ್ತು ವಾಯುವಿನ ವಿಕಾರ, ಸಂಗ್ರಹಣೆ, ಮೂಲವ್ಯಾಧಿ, ಮೂತ್ರಕಟ್ಟು ಅತಿಸಾರ ಮುಂತಾದ ರೋಗಗಳನ್ನು ಗುಣಪಡಿಸುತ್ತದೆ. ಪ್ರಮಾಣ-ಅರ್ಧ ತೊಲದಿಂದ ಒಂದು ತೊಲದವರೆಗೆ ಹಾಲು ಅಥವಾ ಹೆಸರುಕಾಳನ್ನು ಬೇಯಿಸಿದ ಕಟ್ಟಿನೊಡನೆ ಸೇವಿಸಬೇಕು.

## ದಂಟಿನ ಸೊಪ್ಪು

ಉದ್ದವಾದ ನಾಳವುಳ್ಳ ದಂಟಿನಲ್ಲಿ ಕೆಂಪು ಹಸಿರು ಬಣ್ಣದ ೨ ಜಾತಿಗಳಿವೆ. ಕೆಂಪು ಜಾತಿಯ ದಂಟ ಕೆಂಪು ಚುಕ್ಕಿಗಳಿಲ್ಲದೆ ಹಸುರಾಗಿಯೂ ಇರುವುದುಂಟು. ಇದರಲ್ಲಿಯೇ ಇನ್ನೊಂದು ವಿಧ ದಂಟಿಲ್ಲದ ಚಿಕ್ಕಜಾತಿಯ ಸೊಪ್ಪಿದೆ. ಗುಣದಲ್ಲಿ ಸಾಮಾನ್ಯವಾಗಿ ಎರಡೂ ಒಂದೇ ವಿಧವಾಗಿವೆ. ಈ ಸೊಪ್ಪು ಮತ್ತು ದಂಟು ತಂಪು ಗುಣವುಳ್ಳದ್ದು, ಮೇಹವ್ಯಾಧಿಯನ್ನು ಶಾಂತಿಗೊಳಿಸುವುದು, ಗಂಟಲಿನಿಂದ ಬೀಳುವ ರಕ್ತ ಮತ್ತು ಬಹುದಿನದ ಅತಿಸಾರ ಇವೆರಡನ್ನೂ ತಡೆಯುವುದು, ಅತಿಯಾಗಿಹೋಗುತ್ತಿರುವ ಸ್ತ್ರೀಯ ರಜಸ್ಸನ್ನು ತಡೆಯುವುದು, ಮೂಳೆಗಳಲ್ಲಿನ ಉಷ್ಣತೆಯನ್ನು ಕಡಿಮೆಮಾಡುವುದು, ಆಂಗಿದಾಗ ಬರುತ್ತಿರುವ ಜ್ವರವನ್ನು ತಡೆಯುವುದು ಮತ್ತು ಬೇರು ಸಹಿತವಾದ ಇದರ ಕಷಾಯದಿಂದ ಮೂಲವ್ಯಾಧಿಯು ಶಾಂತವಾಗುವುದು. ಇದರ ಎಲೆಗಳನ್ನು ಅರೆದು ಕಟ್ಟುವುದರಿಂದ ಗಾಯಗಳು ಮತ್ತು ಹುಣ್ಣುಗಳು ಮಾಯುವುವು. ಆದರೆ ಇದು ಪ್ಲೀಹದ (ಸ್ಲೀನ್) ವಿಕಾರವುಳ್ಳವರಿಗೆ ಹಿತಕರವಲ್ಲ ಮತ್ತು ಇದನ್ನು ಹೆಚ್ಚಾಗಿ ಸೇವಿಸುವುದರಿಂದ ಪ್ಲೀಹಕ್ಕೆ ಕೆಡಕುಂಟಾಗುತ್ತದೆ. ಮತ್ತು ಕಣ್ಣುಗಳಿಗೂ ಹಿತಕರವಲ್ಲ.

## ಚಕ್ಕೋತ ಸೊಪ್ಪು

ಚಕ್ಕೋತಸೊಪ್ಪು ಉಷ್ಣಗುಣದಿಂದ ಕೂಡಿರುವುದು. ಈ ಸೊಪ್ಪು ಅಗ್ನಿಮಾಂದ್ಯವನ್ನು ದೂರಮಾಡಿ ರುಚಿಯನ್ನು ಹುಟ್ಟಿಸುವುದು. ಆಮ ವಿಕಾರ (ಅರಗಿರುವ ಆಹಾರದ ಭಾಗ)ವನ್ನು ನಾಶಮಾಡುವುದು, ಹಸಿವನ್ನು ಹೆಚ್ಚಿಸುವುದು, ಸಂಗ್ರಹಣೆ, ಕುಷ್ಠ. ಮೂಲವ್ಯಾಧಿ ಮುಂತಾದ ರೋಗಗಳಿಗೆ ಹಿತಕರವಾದುದು. ಮಲಬದ್ಧತೆಯನ್ನು ನಿವಾರಿಸತಕ್ಕ ಸ್ವಭಾವವು ಇದರಲ್ಲಿ ಹೆಚ್ಚಾಗಿಲ್ಲ. ಇದೇ ಜಾತೀಯಲ್ಲಿಯೇ ಇನ್ನೊಂದು ಹುಳಿರಸ ದಿಂದ ಕೂಡಿರುವ ಹುಳಿಚಕ್ಕೋತ ಅಥವಾ ಚುಕ್ಕಿಸೊಪ್ಪು ಎಂದಿದೆ. ಇದೂ ಉಷ್ಣಗುಣವುಳ್ಳದ್ದು ಮತ್ತು ಅಗ್ನಿದೀಪ ವಾದುದು. ಶೂಲರೋಗ, ಎದೆಯ ಬೇನೆ, ಮಲಬದ್ಧತೆ, ವಾಂತಿ, ಗುಲ್ಮ, ವಾತ ಮತ್ತು ನಾಲಗೆಯ ಅರೋಚಕತೆಗಳನ್ನು ಶಾಂತಗೊಳಿಸುತ್ತದೆ. ❋





## ರಾಜ್ಯದ ವಿವಿಧೆಡೆಗಳಲ್ಲಿ ಬಸವ ಜಯಂತಿ ಕಾರ್ಯಕ್ರಮಗಳು
## ಕಾಜುವಳ್ಳಿ – ಏಪ್ರಿಲ್ ೧೬, ೨೦೦೧



ಆಲೂರು ತಾಲ್ಲೂಕು ಕಾಜುವಳ್ಳಿಯಲ್ಲಿ ನಡೆದ ಬಸವ ಜಯಂತಿ ಕಾರ್ಯಕ್ರಮದ ವೇದಿಕೆಯಲ್ಲಿ ಎಡದಿಂದ ಬಲಕ್ಕೆ : ಶ್ರೀ ಮಲ್ಲೇಶ್, ಅಖಿಲ ಭಾರತ ವೀರಶೈವ ಮಹಾಸಭಾದ ಅಧ್ಯಕ್ಷರಾದ ಶ್ರೀ ಭೀಮಣ್ಣ ಖಂಡ್ರೆ, ಪರಮಪೂಜ್ಯ ಶ್ರೀ ಶ್ರೀಗಳವರು, ಶ್ರೀ ಬಿ.ವಿ. ಶಿವಪ್ಪ, ಕೊಡ್ಲಿಪೇಟೆಯ ಶ್ರೀ ಶ್ರೀ ಮಹಾಂತ ಸ್ವಾಮಿಗಳು ಹಾಗೂ ಶ್ರೀ ಬಿ.ಜಿ. ಬಸವರಾಜು ಮೊದಲಾದ ಗಣ್ಯರನ್ನು ಕಾಣಬಹುದು.



ಭಕ್ತರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಪುಷ್ಪವೃಷ್ಠಿ



ಪೂರ್ಣಕುಂಭಗಳೊಂದಿಗೆ ಪರಮಪೂಜ್ಯ ಶ್ರೀ ಶ್ರೀಗಳವರನ್ನು ಸಮಾರಂಭದ ವೇದಿಕೆಗೆ ಬರಮಾಡಿಕೊಳ್ಳುತ್ತಿರುವ ಅಪೂರ್ವ ದೃಶ್ಯ



ಸಮಾರಂಭದಲ್ಲಿ ಕಿಕ್ಕಿರದ ಭಕ್ತರು ಮತ್ತು ಅಭಿಮಾನಿಗಳು

## ಬೆಳಕವಾಡಿ

ಮೇ ೧೯, ೨೦೦೧



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ





## ಕೊಳ್ಳೇಗಾಲ – ಮೇ ೩೧, ೨೦೦೧




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ಚಿತ್ರದಲ್ಲಿ ಮರಳೇಗವಿಮಠದ ಶ್ರೀ ಶ್ರೀ ಕಾಲಾಗ್ನಿ ರುದ್ರಮುನಿ ಸ್ವಾಮಿಗಳು, ಸುತ್ತೂರು ಮಠದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರನ್ನು ಕಾಣಬಹುದು.



ಬಸವ ಜಯಂತಿ ಕಾರ್ಯಕ್ರಮ ಅಂಗವಾಗಿ ಶ್ರೀಮಠದ ಕಲಾವಿದರಿಂದ ಅಭಿನಯಿಸಲ್ಪಟ್ಟ ಜಗಜ್ಯೋತಿ ಬಸವೇಶ್ವರ ನಾಟಕದ ಒಂದು ದೃಶ್ಯ

## ಸೋಂಪುರದಲ್ಲಿ ಸಮುದಾಯ ಭವನಕ್ಕೆ ಶಿಲಾನ್ಯಾಸ

**ಬೆಂ**ಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಮಾದೇನಹಳ್ಳಿ ಗ್ರಾಮದ ಲಿಂಗೈಕ್ಯ ಬಾಳಮಲ್ಲಪ್ಪ ಮತ್ತು ಲಿಂಗೈಕ್ಯ ಮಲ್ಲೆದೇವರು ಅವರ ಕುಟುಂಬದವರು ಸೋಂಪುರದಲ್ಲಿ ಒಂದು ಎಕರೆ ಜಮೀನನ್ನು ಬಹು ಹಿಂದೆಯೇ ಶ್ರೀ ಸಿದ್ಧಗಂಗಾ ಮಠಕ್ಕೆ ದಾನ ನೀಡಿದನ್ನು ಇಲ್ಲಿ ಸ್ಮರಿಸಬಹುದು. ಸ್ಥಳೀಯರ ಕೋರಿಕೆಯಂತೆ ಪರಮಪೂಜ್ಯ ಶ್ರೀ ಶ್ರೀಗಳವರು ಈ ಜಮೀನಿನಲ್ಲಿ ಸಾರ್ವಜನಿಕ ಉಪಯೋಗದ ದೃಷ್ಟಿಯಿಂದ ಒಂದು ಸಮುದಾಯ ಭವನವನ್ನು ನಿರ್ಮಿಸಲು ಅನುಗ್ರಹಿಸಿದ್ದು ಮೇ ೨೪ರಂದು ಸಮುದಾಯ ಭವನಕ್ಕೆ ಶಿಲಾನ್ಯಾಸ ಸಮಾರಂಭ ಪರಮಪೂಜ್ಯರ ದಿವ್ಯ ಹಸ್ತದಿಂದ ನೆರವೇರಿತು. ಈ ಸಂದರ್ಭದಲ್ಲಿ ಗ್ರಾಮ ಪಂಚಾಯತಿ ಅಧ್ಯಕ್ಷರು, ಸದಸ್ಯರು, ಸ್ಥಳೀಯ ಮುಖಂಡರು, ಅಭಿಮಾನಿಗಳು ಭಾಗವಹಿಸಿ ಬಹುದಿನಗಳ ಕನಸು ನನಸಾದುದಕ್ಕೆ ಹರ್ಷ ವ್ಯಕ್ತಪಡಿಸಿದರು.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಸಮುದಾಯ ಭವನಕ್ಕೆ ಶಿಲಾನ್ಯಾಸ

**ಸಹಜ ಪ್ರೀತಿ ಕಲ್ಲನ್ನೂ ಕರಗಿಸುತ್ತದೆ. ಕಟುಕನನ್ನು ಕರುಣಾಮಯನನ್ನಾಗಿಸುತ್ತದೆ.**

– ಶ್ರೀವಾಣಿ





## ಶ್ರೀಮಠದ ದಾಸೋಹ ನಿಧಿಗೆ ಒಂದು ಲಕ್ಷ ರೂ.ಗಳ ಕೊಡುಗೆ



ಮಾರ್ಚ್ ೨೯ರಂದು ಚಳ್ಳಕೆರೆ ತಾಲ್ಲೂಕು ಹೆಗ್ಗೆರೆ ಗ್ರಾಮದ ಶ್ರೀಮತಿ ತಾಯಮ್ಮನವರು ಶ್ರೀಮಠದ ದಾಸೋಹ ನಿಧಿಗೆ ಒಂದು ಲಕ್ಷ ರೂ.ಗಳ ಚೆಕ್ಕನ್ನು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಅರ್ಪಿಸಿದರು. ಈ ಸಂದರ್ಭದಲ್ಲಿ ಚಳ್ಳಕೆರೆ ಮಾಜಿ ಶಾಸಕರಾದ ಶ್ರೀ ಹೆಚ್.ಸಿ. ಶಿವಶಂಕರಪ್ಪ ಹಾಗೂ ಶ್ರೀ ಶಿವಕುಮಾರ ಎಸ್. ಸಜ್ಜನ, ಶ್ರೀ ಬಿ.ಟಿ. ಚಂದ್ರಶೇಖರ್, ಶ್ರೀ ಬಿ. ತಿಪ್ಪಣ್ಣನವರು ಉಪಸ್ಥಿತರಿದ್ದರು.

### ಚಾಣಕ್ಯ ನೀತಿ ಸೂತ್ರಗಳು

೧. ಸಾ ಶ್ರೀರ್ವೋऽವ್ಯಾತ್
ಆ ಲಕ್ಷ್ಮಿಯು ನಿಮ್ಮನ್ನು ಕಾಪಾಡಲಿ.

೨. ಸುಖಸ್ಯ ಮೂಲಂ ಧರ್ಮಃ
ಸುಖಕ್ಕೆ ಮೂಲವು ಧರ್ಮವು.

೩. ಧರ್ಮಸ್ಯ ಮೂಲಮರ್ಥಃ
ಧರ್ಮಕ್ಕೆ ಮೂಲವು ಸಂಪತ್ತು.

೪. ಅರ್ಥಸ್ಯಮೂಲಂ ರಾಜ್ಯಂ
ಸಂಪತ್ತಿಗೆ ಮೂಲವು ಸರ್ಕಾರವು.

೫. ರಾಜ್ಯಸ್ಯ ಮೂಲಮಿಂದ್ರಿಯಜಯಃ
ಸರ್ಕಾರಕ್ಕೆ ಮೂಲವು (ರಾಜರ) ಇಂದ್ರಿಯ ಜಯ

೬. ಇಂದ್ರಿಯ ಜಯಸ್ಯ ಮೂಲಂ ವಿನಯಃ
ಇಂದ್ರಿಯ ಜಯಕ್ಕೆ ಮೂಲವು ವಿನಯ (ಸುಶಿಕ್ಷಣ)

೭. ವಿನಯಸ್ಯಮೂಲಾ ವೃದ್ಧೋಪಸೇ
ವಿನಯಕ್ಕೆ (ಶಿಕ್ಷಣಕ್ಕೆ) ಮೂಲವು ಜ್ಞಾನ ವೃದ್ಧರ ಸೇವೆ.

೮. ವೃದ್ಧೋಪಸ್ಥಾಯಾ; ವಿಜ್ಞಾನಂ
ವೃದ್ಧಸೇವೆಯಿಂದ ವಿಜ್ಞಾನವು ಲಭಿಸುವುದು.

೯. ವಿಜ್ಞಾದೇನಾತ್ಮಾನಂ ಸಂಪಾದಯೋೕತ್
ವಿಜ್ಞಾನದಿಂದ ಆತ್ಮಲಾಭ ಮಾಡಿಕೊಳ್ಳಬೇಕು.

೧೦. ಸಂಪಾದಿರಾತ್ಮಿ ಜಿತಾತ್ಮಾ ಭವರೆ
ಆತ್ಮಲಾಭ ಹೊಂದಿದವನು ಆತ್ಮವನ್ನು ಜಯಿಸುವನು.

೧೧. ಜಿತಾತ್ಮಿ ಸರ್ವಾರ್ಥೈಸ್ಸಂಯುಜ್ಯತೇ
ಆತ್ಮ ಜಯ ಹೊಂದಿದವನು ಸರ್ವಪುರುಷಾರ್ಥಗಳನ್ನುಳ್ಳವನಾಗುತ್ತಾನೆ.

ಸಂಗ್ರಹ : ವಿದ್ವಾನ್ ಬಿ. ಗಂಗಪ್ಪ

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೧೨. | **ಶ್ರೀ ಹೆಚ್. ಪ್ರಭುದೇವ್**<br>**ಬಿನ್ ಹೆಚ್.ಸಿ. ಹೊನ್ನಯ್ಯ**<br>ನಂ. ೫೨೪, ೨ನೇ 'ಎ' ಕ್ರಾಸ್ ೬ನೇ ಮುಖ್ಯರಸ್ತೆ<br>೩ನೇ ಹಂತ, ೩ನೇ ಬ್ಲಾಕ್<br>ಬಸವೇಶ್ವರನಗರ, ಬೆಂಗಳೂರು-೭೯. | ೪,೪೫೫-೦೦<br>(೨ನೇ ಕಂತು) |
| ೪೧೩. | **ಶ್ರೀ ಟಿ. ಚನ್ನಬಸವಯ್ಯ**<br>**ಬಿನ್ ಶ್ರೀ ಮರಿಸಿದ್ಧಪ್ಪ**<br>ತಾಳಗುಂಧ ಮತ್ತು ಅಂಚೆ,<br>ಕಳ್ಳಂಬೆಳ್ಳ ಸಬ್ ಪೋಸ್ಟ್ ಆಫೀಸ್,<br>ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. | ೫,೦೦೧.೦೦ |
| ೪೧೪. | **ಶ್ರೀ ವಿದ್ವಾನ್ ಕೆ.ಎಸ್. ಶಿವನಂಜಯ್ಯ**<br>ನಿವೃತ್ತ ಪ್ರಾಧ್ಯಾಪಕರು, ಬಸವೇಶ್ವರ ಬಡಾವಣೆ,<br>ಕ್ಯಾತ್ಸಂದ್ರ, ಸಿದ್ಧಗಂಗಾಮಠದ ರಸ್ತೆ<br>ತುಮಕೂರು-೪. | ೫,೦೦೧.೦೦ |
| ೪೧೫. | **ಶ್ರೀ ಬಿ.ಎನ್. ಶಿವಶಂಕರಯ್ಯ, (ಹೆಚ್.ಎಂ.ಟಿ.)**<br>ಬಸವೇಶ್ವರ ಕೃಪ<br>೭ನೇ ಕ್ರಾಸ್, ತುಳಸಿ ರಸ್ತೆ, ಗೋಕುಲ ಬಡಾವಣೆ<br>ತುಮಕೂರು-೩. | ೨,೦೦೧.೦೦ |
| ೪೧೬. | **ಶ್ರೀ ಕೆ.ಎಂ. ವೀರಭದ್ರಯ್ಯ, (ಮೈಸೂರು)**<br>ಎ-೩, ಹೊಸ ಕಾಂತರಾಜ ಅರಸ್ ರಸ್ತೆ,<br>ಮೈಸೂರು-೨೩. | ೨,೦೦೧.೦೦ |
| ೪೧೭. | **ಶ್ರೀ ಕೆ. ಸಿದ್ಧಗಂಗಯ್ಯ,**<br>ನಿವೃತ್ತ ಪ್ರಾಂಶುಪಾಲರು,<br>ನಂ. ೯೫೯, ೨ನೇ ಮುಖ್ಯರಸ್ತೆ, ೪ನೇ ಕ್ರಾಸ್<br>ವಿಜಯನಗರ, ಬೆಂಗಳೂರು-೪೦. | ೧,೦೦೧.೦೦<br>(೧ನೇ ಕಂತು) |
| ೪೧೮. | **ಶ್ರೀ ಮಂಜುನಾಥ್,**<br>ಕೆ.ಎಂ.ಎಫ್, ಎಸ್.ಆರ್.ಎಸ್. ಕಾಂಪೌಂಡ್<br>ಶಾಂತಿನಗರ, ರೈಲ್ವೇ ನಿಲ್ದಾಣದ ಹಿಂಭಾಗ<br>ತುಮಕೂರು. | ೧,೦೦೦.೦೦<br>(೨ೀ ಕಂತು) |
| ೪೧೯. | **ಶ್ರೀ ಲೋಕೇಶ್‌ಮೂರ್ತಿ**<br>ನಂ. ೧೨೧೨, ೩ನೇ ಮುಖ್ಯರಸ್ತೆ,<br>ಚಂದ್ರಾಲೇ ಔಟ್, ಬೆಂಗಳೂರು-೪೦. | ೧,೦೦೦.೦೦<br>(೧ನೇ ಕಂತು) |
| ೪೨೦. | **ಶ್ರೀ ಟಿ.ವಿ. ಚಂದ್ರಶೇಖರಯ್ಯ**<br>**ಬಿನ್ ವೀರಣ್ಣ**<br>ಅಂಗಡಿ, ತರಿದಾಳ್ ಅಟ್ ಅಂಡ್ ಪೋಸ್ಟ್,<br>ಗೌರಿಬಿದನೂರು ತಾಲ್ಲೂಕು<br>ಕೋಲಾರ ಜಿಲ್ಲೆ. | ೧,೦೦೦.೦೦<br>(೧ನೇ ಕಂತು) |
| ೪೨೧. | **ಶ್ರೀ ತೈಲಗೆರೆ ಎಂ. ನಾರಾಯಣಸ್ವಾಮಿ**<br>ದಿಬ್ಬೂರುಹಳ್ಳಿ, ಕಾಕೋಳು ಅಂಚೆ,<br>ಹೆಸರಘಟ್ಟ ಹೋಬಳಿ,<br>ಬೆಂಗಳೂರು ಉತ್ತರ | ೧,೦೦೦.೦೦<br>(೨ನೇ ಕಂತು) |
| ೪೨೨ | **ಶ್ರೀ ಎ.ಎನ್. ಗುರುಸಿದ್ಧಪ್ಪ**<br>ಶಿವನಂಜಪ್ಪ ಬಡಾವಣೆ<br>ಸಾಯಿಬಾಬ ದೇವಸ್ಥಾನದ ಹಿಂಭಾಗ<br>ಕೆ.ಆರ್. ಬಡಾವಣೆ, ತಿಪಟೂರು,<br>ತುಮಕೂರು ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೪೨೩. | **ಶ್ರೀ ಬಿ. ಗಾಂಧಿ**<br>ನಂ. ೫೪೫, ೧೧ನೇ 'ಎ' ಕ್ರಾಸ್<br>ವಿಭಾಗ 'ಎ' ಯಲಹಂಕ ಉಪನಗರ ಟೌನ್<br>ಬೆಂಗಳೂರು-೬೪. | ೧,೦೦೦.೦೦<br>(೨ನೇ ಕಂತು) |
| ೪೨೪. | **ಶ್ರೀಮತಿ ಶಾರದಮ್ಮ ಕೋಂ. ಟಿ. ಸಿದ್ಧಲಿಂಗಯ್ಯ**<br>ಮೇಗಲಬೀದಿ, ಕೆಂಗೇರಿ ಅಟ್ ಪೋಸ್ಟ್,<br>ಬೆಂಗಳೂರು ದಕ್ಷಿಣ ತಾಲ್ಲೂಕು. | ೨,೦೦೯.೦೦ |
| ೪೨೫. | **ಶ್ರೀಮತಿ ವೈ.ಎ. ದೇವರತ್ನಮ್ಮ**<br>**ಕೋಂ. ಆರ್. ಮಲ್ಲಣ್ಣ**<br>ನಂ. ೯೫/೩, ಬಸವೇಶ್ವರ ಸ್ಟೋರ್ಸ್,<br>೬ನೇ ಮೈನ್ ರೋಡ್, ಚಾಮರಾಜಪೇಟೆ,<br>ಬೆಂಗಳೂರು-೪. | ೧,೦೦೦.೦೦<br>(೨ನೇ ಕಂತು) |

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - postal Reg.No. KA/SK/TMR/385/2001



**ಶ್ರೀವಾಣಿ**

ಒಂದು ತುತ್ತು ಅನ್ನದ ಹಿಂದೆ ಸಾವಿರಾರು ಮಂದಿಯ ಶ್ರಮದ ಶಕ್ತಿಯ ಸಾಗರವೇ ನಿಂತಿದೆ. ಅದನ್ನು ಅರಿತಾಗಲೇ ಮನುಷ್ಯ ಮನುಷ್ಯನಾಗುವುದು.



## ಶೈಕ್ಷಣಿಕ ಸಾಲಿನಲ್ಲಿ ಶ್ರೀಮಠದಲ್ಲಿ ಪ್ರವೇಶಾವಕಾಶ ಕೋರಿ ರಾಜ್ಯದ ವಿವಿಧ ಭಾಗಗಳಿಂದ ಬಂದ ವಿದ್ಯಾರ್ಥಿಗಳು ಹಾಗೂ ಪೋಷಕರು – ವಿವಿಧ ದೃಶ್ಯಗಳು.







ಪರಮಪೂಜ್ಯ ಶ್ರೀ ಶ್ರೀಗಳವರು ವಿದ್ಯಾರ್ಥಿಯೊಬ್ಬನಿಂದ ಮಾಹಿತಿ ಪಡೆಯುತ್ತಿರುವುದು.





**ಶ್ರೀವಾಣಿ**

ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಅದೆಷ್ಟೋ ಮಕ್ಕಳಿಗೆ ಹಾಸಿಕೊಳ್ಳಲು ಹಾಸಿಗೆ ಬೇಡ ಚಾಪೆ ಕೂಡ ಗತಿಯಿಲ್ಲ. ಹೊದಿಯಲು ಒಂದು ಹಚ್ಚಡ ಅಂದರೆ ಬೆಡ್‌ಷೀಟ್ ಕೂಡ ಇಲ್ಲ. ಒಂದೇ ಬೆಡ್‌ಷೀಟನ್ನು ಇಬ್ಬರು ಹೊದಿಯುತ್ತಿರುವ ದೃಶ್ಯ ನೋಡಿದಾಗ ಅತೀವ ನೋವಾಗುತ್ತದೆ. ಒಂದು ಟವೆಲ್‌ಕೊಳ್ಳಲು ಒದ್ದಾಡುತ್ತವೆ. ಅಂಥ ಮಕ್ಕಳ ಬಗ್ಗೆ ನಮಗೆ ಸದಾ ಚಿಂತೆಯಾಗಿದೆ.



